ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೨<br>Volume 152 | ಬೆಂಗಳೂರು, ಗುರುವಾರ, ಜನವರಿ ೫, ೨೦೧೭ (ಪುಷ್ಯ ೧೫, ಶಕ ವರ್ಷ ೧೯೩೮)<br>Bengaluru, Thursday, January 5, 2017 (Pushya 15, Shaka Varsha 1938) | ಸಂಚಿಕೆ ೧<br>Issue 1 |
|---|---|---|

# ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

ವಿಷಯ : ದಾವಣಗೆರೆ ಜಿಲ್ಲೆಯ ಚನ್ನಗಿರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ(ತಾತ್ಕಾಲಿಕ)ಗೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

ಓದಲಾಗಿದೆ :
1) ಸರ್ಕಾರದ ಆದೇಶ ಸಂಖ್ಯೆ: ನಅಇ 65 ಬೆಂರೂಪ್ರಾ 2011, ದಿ: 01.06.2011 ಮತ್ತು 16.07.2011.
2) ಮುಖ್ಯಾಧಿಕಾರಿ, ಚನ್ನಗಿರಿ ಪುರಸಭೆ, ಚನ್ನಗಿರಿ ಇವರ ಪತ್ರ ಸಂಖ್ಯೆ:ಮ.ಯೋ/ಸಿಆರ್/22/2015–16 ದಿ: 05.10.2015.
3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ : ನಗ್ರಾಯೋ(12)/ಬೆಂವಿ/ಚಮಯೋ(ತಾ)(ತಾ)2015–16, ದಿ:20.11.2015.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಚನ್ನಗಿರಿ ಪಟ್ಟಣಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯನ್ನು ವಿಸ್ತರಿಸಿ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿರುತ್ತದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಚನ್ನಗಿರಿ ಪುರಸಭೆ ಯೋಜನಾ ಪ್ರಾಧಿಕಾರ, ರವರು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 9(1) ರನ್ವಯ ಚನ್ನಗಿರಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾಯೋಜನೆ(ತಾತ್ಕಾಲಿಕ)ಯನ್ನು ಸಿದ್ದಪಡಿಸಿ ಸರ್ಕಾರದ ಅನುಮೋದನೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ಚನ್ನಗಿರಿ ಪಟ್ಟಣದ ಜನಸಂಖ್ಯೆಯು 2011 ರಲ್ಲಿ 21,313 ಇದ್ದು, 20 ವರ್ಷಗಳ ಯೋಜನಾ ಅವಧಿಗೆ ಅಂದರೆ, 2031ನೇ ಇಸವಿಗೆ ಜನಸಂಖ್ಯೆಯು ಸುಮಾರು 35,000 ಆಗಬಹುದೆಂದು ಅಂದಾಜಿಸಿ ಮಹಾಯೋಜನೆಯನ್ನು ತಯಾರಿಸಲಾಗಿದೆ. ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 516.0 ಹೆಕ್ಟೇರ್ ವಿಸ್ತೀರ್ಣದಲ್ಲಿ 390.0 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ (12)ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 390.00 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 214.26 ಹೆಕ್ಟೇರ್(ಶೇ.54.94), ವಾಣಿಜ್ಯಕ್ಕಾಗಿ 25.14 ಹೆಕ್ಟೇರ್ (ಶೇ.6.45), ಕೈಗಾರಿಕೆಗಾಗಿ 17.81 ಹೆಕ್ಟೇರ್ (ಶೇ.4.57), ಸಾರ್ವಜನಿಕ / ಅರೆ ಸಾರ್ವಜನಿಕ ಉಪಯೋಗಕ್ಕೆ 29.58 ಹೆಕ್ಟೇರ್ (ಶೇ.7.58), ಸಂರಕ್ಷಿತ ಪ್ರದೇಶಕ್ಕೆ 4.04 ಹೆಕ್ಟೇರ್ (ಶೇ.1.04), ಸಾರ್ವಜನಿಕ ಉಪಯುಕ್ತತೆಗಾಗಿ 0.17 ಹೆಕ್ಟೇರ್ (ಶೇ.0.04), ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 24.08 ಹೆಕ್ಟೇರ್ (ಶೇ.6.17) ಹಾಗೂ ಸಾರಿಗೆ / ಸಂಪರ್ಕ ವಲಯಕ್ಕೆ 66.34 ಹೆಕ್ಟೇರ್ (ಶೇ.17.01), ಕೃಷಿ ಉಪಯೋಗಕ್ಕೆ 8.58 ಹೆಕ್ಟೇರ್ (ಶೇ.2.20) ಮೀಸಲಿಟ್ಟು ಭೂ ಉಪಯೋಗವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಕೂಲಕಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 329 ಬೆಂರೂಪ್ರಾ 2015, ಬೆಂಗಳೂರು, ದಿನಾಂಕ : 22.10.2016.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಚನ್ನಗಿರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–I) ಗೆ, ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

**P.R. 658**
**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರದ ಶ್ರೀ ಕೆ. ವೆಂಕಟಪತೆಪ್ಪ ದೈಹಿಕ ಶಿಕ್ಷಣ ಮಹಾವಿದ್ಯಾಲಯವನ್ನು ವೇತನಾನುದಾನಕ್ಕೆ ಒಳಪಡಿಸುವ ಬಗ್ಗೆ.

**ಓದಲಾಗಿದೆ**

1. ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಶಿತ3/ಇತರೆ/ಅನುದಾನ/03/2006–07, ದಿನಾಂಕ 17.04.2012, 30.01.2013 ಮತ್ತು 5.2.2013.
2. ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪರಿಶೀಲನಾ ವರದಿ ಸಂಖ್ಯೆ: ಕಾಶಿಇ/01/ವೇಅನುದಾನ/2012–13/ಜಂನಿಶೈ, ದಿನಾಂಕ : 25.03.2013.
3. ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಮೈಸೂರು, ಇವರ ಪತ್ರ ಸಂಖ್ಯೆ: ಪ್ರಾಕಮೈ/ಕಾಶಿಇ/402/ಜಂನಿವೈಕ/2013–14, ದಿನಾಂಕ : 28.1.2014.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖಿತ (1)ರ ಪತ್ರದಲ್ಲಿ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು. ಇವರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ ಚಿಕ್ಕಬಳ್ಳಾಪುರದ ಶ್ರೀ ಕೆ. ವೆಂಕಟಪತೆಪ್ಪ ದೈಹಿಕ ಶಿಕ್ಷಣ ಮಹಾವಿದ್ಯಾಲಯವು ಸರ್ಕಾರಿ ಆದೇಶ ಸಂ.ಇಡಿ 25 ಯುಜಿಸಿ 83, ದಿನಾಂಕ: 11.7.1983 ರನ್ವಯ 1983–84 ನೇ ಶೈಕ್ಷಣಿಕ ಸಾಲಿನಿಂದ ಸಾಮಾನ್ಯ ಮತ್ತು ಹಿಂದುಳಿದ ಆಡಳಿತ ಮಂಡಳಿಯಿಂದ ಸ್ಥಾಪಿತವಾಗಿದ್ದು, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡಿದ್ದು, ಎನ್.ಸಿ.ಟಿ.ಇ/ಯು.ಜಿ.ಸಿ., ನಿಯಮಗಳನ್ವಯ ಅಗತ್ಯ ಮೂಲಭೂತ ಸೌಲಭ್ಯಗಳಾದ, ಉತ್ತಮ ಕಟ್ಟಡ ಗ್ರಂಥಾಲಯ, ಬೋಧನಾ ಕೊಠಡಿಗಳು, ಆಟದ ಮೈದಾನ, ಪ್ರತ್ಯೇಕ ಶೌಚಾಲಯಗಳು, ವಿದ್ಯುಚ್ಛಕ್ತಿ, ಆಟೋಪಕರಣಗಳು, ಪೀಠೋಪಕರಣಗಳು, ಹಾಗೂ ಇತರ ಸೌಲಭ್ಯಗಳನ್ನು ಹೊಂದಿರುವುದಲ್ಲದೆ, ಉತ್ತಮ ದಾಖಲಾತಿ, ಕಳೆದ 5 ವರ್ಷಗಳಿಂದ ಉತ್ತಮ ಫಲಿತಾಂಶ, 1995 ಕ್ಕಿಂತ ಮುಂಚಿತವಾಗಿ ನೇಮಕಾತಿ ಹೊಂದಿರುವುದರಿಂದ ಮೀಸಲಾತಿ ನಿಯಮಗಳಿಂದ ವಿನಾಯಿತಿ ಪಡೆದಿದ್ದು, ಸಂಸ್ಥೆಯ ಮೇಲೆ ಯಾವುದೇ ನ್ಯಾಯಾಲಯ ಪ್ರಕರಣಗಳು ಇಲ್ಲದಿರುವ ಬಗ್ಗೆ ಹಾಗೂ ಸಿಬ್ಬಂದಿಯನ್ನು ವೇತನಾನುದಾನಕ್ಕೆ ಒಳಪಡಿಸಿದ್ದಲ್ಲಿ ತಗಲುವ ವಾರ್ಷಿಕ ಖರ್ಚು ಇತ್ಯಾದಿ ವಿವರಗಳನ್ನು ದೃಢೀಕೃತ ಅಗತ್ಯ ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಉಲ್ಲೇಖಿತ (2)ರ ಪತ್ರದಲ್ಲಿ ಬೆಂಗಳೂರಿನ ಕಾಲೇಜು ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ಪರಿಶೀಲನಾ ವರದಿಯಲ್ಲಿ ಸದರಿ ಮಹಾವಿದ್ಯಾಲಯವು ಎಲ್ಲಾ ಅಗತ್ಯ ಮೂಲಭೂತ ಮತ್ತು ಶೈಕ್ಷಣಿಕ ಸೌಲಭ್ಯಗಳನ್ನು ಹೊಂದಿದ್ದು, ವಿಶ್ವವಿದ್ಯಾಲಯ ನಿಗದಿಪಡಿಸಿದ ವಿದ್ಯಾರ್ಥಿ ಪ್ರಮಾಣಕ್ಕನುಗುಣವಾಗಿ ಪ್ರವೇಶಾತಿ ಮಾಡಿಕೊಂಡಿದ್ದು, ಉತ್ತಮ ಫಲಿತಾಂಶವನ್ನು ಪಡೆದು ಪ್ರತಿ ವರ್ಷ ರ್‍ಯಾಂಕ್‌ಗಳನ್ನು ಪಡೆದಿರುವುದಲ್ಲದೆ ದಿನಾಂಕ 21.4.2012ರಲ್ಲಿ ನ್ಯಾಕ್‌ನಿಂದ ಬಿ ಶ್ರೇಣಿಯನ್ನು ಪಡೆದಿರುತ್ತದೆಂದು, ಸಿಬ್ಬಂದಿಯನ್ನು ವೇತನಾನುದಾನಕ್ಕೆ ಒಳಪಡಿಸಲು ಶಿಫಾರಸ್ಸು ಮಾಡಿ ಇದಕ್ಕೆ ತಗಲುವ ವಾರ್ಷಿಕ ಖರ್ಚು ಇತ್ಯಾದಿ ವಿವರಗಳನ್ನು ಸಲ್ಲಿಸಿ, ಸದರಿ ಮಹಾವಿದ್ಯಾಲಯವು ವೇತನಾನುದಾನಕ್ಕೆ ಒಳಪಡಬೇಕಾದ ಎಲ್ಲಾ ಅರ್ಹತೆಗಳನ್ನು ಹೊಂದಿದೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಉಲ್ಲೇಖಿತ (3)ರ ಪತ್ರದಲ್ಲಿ ಮೈಸೂರಿನ ಪ್ರಾದೇಶಿಕ ಜಂಟಿ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ ಶ್ರೀ ಕೆ. ವೆಂಕಟಪತೆಪ್ಪ ದೈಹಿಕ ಶಿಕ್ಷಣ ಮಹಾವಿದ್ಯಾಲಯಕ್ಕೆ ಬೆಂಗಳೂರು ವಿಶ್ವವಿದ್ಯಾಲಯವು ವಿದ್ಯಾರ್ಥಿ ಪ್ರವೇಶಾತಿ ಮಿತಿಯನ್ನು 40ಕ್ಕೆ ನಿಗದಿಗೊಳಿಸಿದ್ದು, ಅನುದಾನ ಸಂಹಿತೆ/ಸಿಬ್ಬಂದಿ ಮಾದರಿ (ರೂಪಿಕೆ) ಪ್ರಕಾರ ಮಂಜೂರು ಮಾಡಬೇಕಾದ ಹುದ್ದೆಗಳ ಸಂಖ್ಯೆ/ಬೋಧಕ/ತಾಂತ್ರಿಕ/ಬೋಧಕೇತರ ಸಂಖ್ಯೆಗಳ ಈ ಕೆಳಕಂಡಂತೆ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | /ಬೋಧಕ/ತಾಂತ್ರಿಕ/ಬೋಧಕೇತರ ಹುದ್ದೆಯ ಹೆಸರು | ಸಂಖ್ಯೆ |
|---|---|---|
| 1 | ಪ್ರಾಂಶುಪಾಲರು | 01 |
| 2 | ಉಪನ್ಯಾಸಕರು | 04 |
| 3 | ಗ್ರಂಥಪಾಲಕರು | 01 |
| 4 | ದೈಹಿಕ ಶಿಕ್ಷಕರು | 01 |

| ಕ್ರಮ ಸಂಖ್ಯೆ | /ಬೋಧಕ/ತಾಂತ್ರಿಕ/ಬೋಧಕೇತರ ಹುದ್ದೆಯ ಹೆಸರು | ಸಂಖ್ಯೆ |
|---|---|---|
| 5 | ಪ್ರಯೋಗಾಲಯ ಸಹಾಯಕರು | 02 |
| 6 | ಅಧೀಕ್ಷಕರು | 02 |
| 7 | ಪ್ರಥಮ ದರ್ಜೆ ಸಹಾಯಕರು | 01 |
| 8 | ದ್ವಿತೀಯ ದರ್ಜೆ ಸಹಾಯಕರು | 02 |
| 9 | ಬೆರಳಚ್ಚುಗಾರರು | 01 |
| 10 | ಗ್ರಂಥಾಲಯ ಸಹಾಯಕರು | 01 |
| 11 | ಅಟೆಂಡರ್ | 01 |
| 12 | ಮಾರ್ಕರ್ | 02 |
| 13 | ಉಗ್ರಾಣ ಅಧಿಕಾರಿ (ಸ್ಟೋರ್ ಕೀಪರ್) | 01 |
| 13 | ಬಾಣಸಿಗರು | 01 |
| 14 | ಸಹಾಯಕ ಬಾಣಸಿಗರು | 01 |
| 15 | ಗ್ರೂಪ್ ಡಿ | 01 |
| 16 | ಸ್ವೀಪರ್ | 03 |
| 17 | ರಾತ್ರಿ ಕಾವಲುಗಾರ | 02 |

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಯು.ಜಿ.ಸಿ./ಎನ್.ಸಿ.ಟಿ.ಇ. ನಿಯಮಾವಳಿಗಳು, 1997 ಮತ್ತು 2014ರನ್ವಯ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 141 ಯುಆರ್‌ಸಿ 2015, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಚಿಕ್ಕಬಳ್ಳಾಪುರದ ಶ್ರೀ ಕೆ. ವೆಂಕಟಪತೆಪ್ಪ ದೈಹಿಕ ಶಿಕ್ಷಣ ಮಹಾವಿದ್ಯಾಲಯವನ್ನು ವೇತನಾನುದಾನಕ್ಕೆ ಒಳಪಡಿಸಲು ಯು.ಜಿ.ಸಿ./ಎನ್.ಸಿ.ಟಿ.ಇ. ನಿಯಮಾವಳಿಗಳು 1997 ಮತ್ತು 2014ರಲ್ಲಿ ನೀಡಿರುವ ಸಿಬ್ಬಂದಿ ರೂಪಿಕೆಯ ಮಾರ್ಗಸೂಚಿಯನ್ವಯ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ದೈಹಿಕ ಶಿಕ್ಷಣ ಮಹಾವಿದ್ಯಾಲಯದಲ್ಲಿ ಅಳವಡಿಸಿಕೊಂಡಿರುವ ಸಿಬ್ಬಂದಿ ರೂಪಿಕೆ, ಮೈಸೂರಿನ ಪ್ರಾದೇಶಿಕ ಜಂಟಿ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯನ್ನು ಪರಿಗಣಿಸಿ, ಈ ಕೆಳಕಂಡ ಬೋಧಕ, ತಾಂತ್ರಿಕ ಮತ್ತು ಬೋಧಕೇತರ ಸಿಬ್ಬಂದಿಗಳ ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಮಂಜೂರಾತಿ ನೀಡಿ ಆದೇಶಿಸಲಾಗಿದೆ.

**ಬೋಧಕ ಸಿಬ್ಬಂದಿ**

| ಕ್ರಮ ಸಂಖ್ಯೆ | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ರಾಂಶುಪಾಲರು | 01 |
| 2 | ಸಹ ಪ್ರಾಧ್ಯಾಪಕರು | 02 |
| 3 | ಸಹಾಯಕ ಪ್ರಾಧ್ಯಾಪಕರು | 06 |

**ತಾಂತ್ರಿಕ ಮತ್ತು ಬೋಧಕೇತರ ಸಿಬ್ಬಂದಿ**

| ಕ್ರಮ ಸಂಖ್ಯೆ | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1 | ಗ್ರಂಥಪಾಲಕರು | 01 |
| 2 | ಫಿಸಿಯೋಥೆರಪಿಸ್ಟ್ | 01 |
| 3 | ಗ್ರೌಂಡ್ಸ್ ಮನ್/ ಮಾರ್ಕರ್ | 02 |
| 4 | ಲೆಕ್ಕಪತ್ರಸಹಾಯಕ/ ಪ್ರಥಮ ದರ್ಜೆಸಹಾಯಕರು | 01 |
| 5 | ಆಫೀಸ್ ಅಸಿಸ್ಟೆಂಟ್/ ದ್ವಿತೀಯ ದರ್ಜೆ ಸಹಾಯಕರು/ಕ್ಲರ್ಕ್ ಕಮ್ ಟೈಪಿಸ್ಟ್ | 02 |

| ಕ್ರಮ ಸಂಖ್ಯೆ | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 6 | ಸ್ಟೋರ್ ಕೀಪರ್ | 01 |
| 7 | ಸ್ಕ್ಯಾವೆಂಜರ್ | 01 |
| 8 | ಅಟೆಂಡರ್ | 02 |

**ಹಾಸ್ಟೆಲ್ ಸಿಬ್ಬಂದಿ (ವಸತಿ ನಿಲಯ)**

| ಕ್ರಮ ಸಂಖ್ಯೆ | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1 | ಅಧೀಕ್ಷಕರು | 01 |
| 2 | ದ್ವಿತೀಯ ದರ್ಜೆ ಸಹಾಯಕ | 01 |
| 3 | ಮುಖ್ಯ ಬಾಣಸಿಗ | 01 |
| 4 | ಸಹಾಯಕ ಬಾಣಸಿಗ | 01 |
| 5 | ಶುಚಿಗಾರ | 01 |
| 6 | ವಾಚ್ ಮನ್ | 01 |

**ಷರತ್ತುಗಳು :–**

1. ಕಾಲೇಜು ದಿನಾಂಕ 01.06.1987ರ ಪೂರ್ವದಲ್ಲಿ ಪ್ರಾರಂಭಿಸಿ ನಿರಂತರವಾಗಿ ನಡೆಯುತ್ತಿರಬೇಕು.
2. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಸರಿದೂಗುವವರೆಗೂ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.
3. ಸದರಿ ಸಂಸ್ಥೆಯ ಕಟ್ಟಡ ಹಾಗೂ ಇನ್ನಿತರ ಮೂಲಭೂತ ಸೌಲಭ್ಯಗಳನ್ನು ಅನುದಾನ ಸಂಹಿತೆಯನ್ವಯ ಒದಗಿಸಿಕೊಂಡಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು.
4. ಆಡಳಿತ ಮಂಡಳಿಯಲ್ಲಿ ವ್ಯಾಜ್ಯ ಇರತಕ್ಕದ್ದಲ್ಲ. ಒಂದು ವೇಳೆ ಅಂತಹ ವ್ಯಾಜ್ಯ ಇದ್ದಲ್ಲಿ ಅಂತಹ ಸಂಸ್ಥೆಯನ್ನು ಅನುದಾನಕ್ಕೆ ಒಳಪಡಿಸಲು ಅರ್ಹತೆ ಪಡೆಯುವುದಿಲ್ಲ.
5. ಶೈಕ್ಷಣಿಕ ಮಾನ್ಯತೆಯನ್ನು ಸಂಬಂಧಿಸಿದ ನಿಯಮ/ಆದೇಶಗಳನ್ವಯ ನಿಗದಿಪಡಿಸಿದಂತೆ ಪಡೆಯತಕ್ಕದ್ದು. ನಿಗದಿತ ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಪರಿಶೀಲಿಸುವುದು. ತಪ್ಪಿದಲ್ಲಿ ವೇತನಾನುದಾನ ನಿಲ್ಲಿಸಲಾಗುವುದು.
6. ಆಡಳಿತ ಮಂಡಳಿಯು ಈ ಆದೇಶದ ಪ್ರಕಾರ ವಿಧಿಸಿರುವ ಷರತ್ತುಗಳನ್ನು ಪಾಲಿಸುವ ಬಗ್ಗೆ ರೂ. 50–00ರ ದಾಸ್ತಾವೇಜು ಕಾಗದ (Document sheet) ದಲ್ಲಿ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಕರಾರು ಪತ್ರವನ್ನು ನೀಡತಕ್ಕದ್ದು. ಈ ಕರಾರು ಪತ್ರವನ್ನು ನೀಡಿದ ನಂತರವೇ ಅನುದಾನ ಪಾವತಿ ಮಾಡಲು ಕ್ರಮ ತೆಗೆದುಕೊಳ್ಳುವುದು.
7. ಆಡಳಿತ ಮಂಡಳಿಯವರು ಒಪ್ಪಂದದಲ್ಲಿನ ಹಾಗೂ ಮೇಲೆ ಹೇಳಲಾದ ಎಲ್ಲಾ ಅಥವಾ ಯಾವುದೇ ಒಂದು ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದರೆ ಅಥವಾ ತಪ್ಪು ಲೆಕ್ಕ ಪತ್ರಗಳನ್ನು ಅಥವಾ ತಪ್ಪು ದಾಖಲೆಗಳನ್ನು ಒದಗಿಸಿದರೆ ಅಥವಾ ತಪ್ಪು ಮಾಹಿತಿಗಳನ್ನು ನೀಡಿದರೆ ಅಥವಾ ಯಾವುದೇ ಮೋಸ ಎಸಗಿರುವುದು ಕಂಡು ಬಂದಲ್ಲಿ ಸರ್ಕಾರವು ಆಡಳಿತ ಮಂಡಳಿಗೆ ಅಥವಾ ಸಿಬ್ಬಂದಿಗೆ ಈ ಕರಾರಿನ ಮೇರೆಗೆ ಈಗಾಗಲೇ ನೀಡಲಾದ ಪೂರ್ಣ ಅಥವಾ ಭಾಗಶಃ ಅನುದಾನವನ್ನು ಮುಂದುವರಿಸದಿರುವ ಅಥವಾ ತಡೆಹಿಡಿಯುವ ಹಾಗೂ ಈ ಕರಾರಿನ ಮೇರೆಗೆ ಸರ್ಕಾರಕ್ಕೆ ಬಾಕಿ ಎಂದು ಕಂಡು ಬಂದ ಮೊಬಲಗನ್ನು ಆಡಳಿತ ಮಂಡಳಿಯಿಂದ ವಸೂಲು ಮಾಡುವ ಅಧಿಕಾರವನ್ನು ಹೊಂದಿರುತ್ತದೆ.
8. ವೇತನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.
9. ಸದರಿ ಕಾಲೇಜಿನ ಫಲಿತಾಂಶ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ಈ ಬಗ್ಗೆ ಕಳೆದ 05 ವರ್ಷಗಳ ಫಲಿತಾಂಶವನ್ನು ಆಧರಿಸಿ ವೇತನಾನುದಾನಕ್ಕೆ ಒಳಪಡಿಸಲು ಅರ್ಹತೆ ಪಡೆದಿರುವುದನ್ನು ದೃಢಿಕರಿಸಿಕೊಂಡು ಕ್ರಮ ವಹಿಸಬೇಕು.
10. ಸದರಿ ಕಾಲೇಜನ್ನು ವೇತನಾನುದಾನಕ್ಕೆ ಒಳಪಡಿಸಲು ತಗುಲುವ ವೆಚ್ಚವನ್ನು ಇಲಾಖೆಗೆ ಒದಗಿಸಿದ ಯೋಜನಾ ಅನುದಾನದ ಮಿತಿಯಲ್ಲಿಯೇ ಭರಿಸಲು ಹೊಂದಾಣಿಕೆ ಮಾಡಿಕೊಳ್ಳಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 364 ವೆಚ್ಚ–8/2016 ದಿನಾಂಕ 20.8.2016 ರಲ್ಲಿ ನೀಡಿರುವ ಅಭಿಪ್ರಾಯ/ಸಹಮತಿಗಳನ್ವಯ ಹೊರಡಿಸಲಾಗಿದೆ.

**P.R. 659**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎ. ಅಹಮದ್ ಜಾನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು–2)

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಿರ್ಮಾತೃ **"ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ"**ವನ್ನು ಸ್ಥಾಪಿಸುವ ಕುರಿತು.

**ಪ್ರಸ್ತಾವನೆ :–**

ಬೆಂಗಳೂರಿನ ನಿರ್ಮಾತೃ **"ನಾಡಪ್ರಭು ಕೆಂಪೇಗೌಡ"** ಇವರು ಬೆಂಗಳೂರಿನ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿರುವುದನ್ನು ಪರಿಗಣಿಸಿ, ನಾಡಪ್ರಭು ಕೆಂಪೇಗೌಡರವರು ನಿರ್ಮಿಸಿರುವ ಸ್ಮಾರಕಗಳು, ಪಾರಂಪರಿಕ ಕಟ್ಟಡಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಿ, ಸರ್ಕಾರವು **"ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ"** ವನ್ನು ಸ್ಥಾಪಿಸಲು ತೀರ್ಮಾನಿಸಿರುತ್ತದೆ.

ಮಾನ್ಯ ಮುಖ್ಯಮಂತ್ರಿಯವರು 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಕಂದಾಯ ಇಲಾಖೆಯ ಕಾರ್ಯವ್ಯಾಪ್ತಿಯಡಿ ಕಂಡಿಕೆ–335ರಲ್ಲಿ ಬೆಂಗಳೂರಿನ ನಿರ್ಮಾತೃ ನಾಡಪ್ರಭು ಕೆಂಪೇಗೌಡ ಸ್ಮಾರಕಗಳು, ಪಾರಂಪಾರಿಕ ಕಟ್ಟಡಗಳ ಸಂರಕ್ಷಣೆಗೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ ಸ್ಥಾಪನೆಗೆ ₹. 5.00 ಕೋಟಿಯನ್ನು ಮೀಸಲಿರಿಸಿ ಘೋಷಿಸಿರುತ್ತಾರೆ. ಅದರಂತೆ ಕಂದಾಯ ಇಲಾಖೆಗೆ ಲೆಕ್ಕ ಶೀರ್ಷಿಕೆ: "2250–00–103–9–00 ಇತರೆ ಖರ್ಚು"ಗಳಡಿಯಲ್ಲಿ ₹. 500.00 ಲಕ್ಷಗಳನ್ನು ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ ಸ್ಥಾಪನೆಗಾಗಿ ಒದಗಿಸಲಾಗಿರುತ್ತದೆ.

ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರವು ಬೆಂಗಳೂರು ಕಂದಾಯ ವಿಭಾಗದ ಕಾರ್ಯವ್ಯಾಪ್ತಿಯಲ್ಲಿರುತ್ತದೆ. ಬೆಂಗಳೂರಿನ ನಿರ್ಮಾತೃ ನಾಡಪ್ರಭು ಕೆಂಪೇಗೌಡರವರ ಸ್ಮಾರಕಗಳು, ಪಾರಂಪರಿಕ ಕಟ್ಟಡಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಹಾಗೂ ಪ್ರವಾಸೋದ್ಯಮ ಸ್ಥಳಗಳನ್ನು ಅಭಿವೃದ್ಧಿಪಡಿಸುವ ಸಲುವಾಗಿ ಪ್ರಾಧಿಕಾರದ ಪೂರ್ವಭಾವಿ ಕಾರ್ಯಗಳನ್ನು ಕೈಗೊಳ್ಳಲು ಹಾಗೂ ಕರಡು ವಿಧೇಯಕದ ಪ್ರಸ್ತಾವನೆಯನ್ನು ತಯಾರಿಸಲು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರನ್ನು **"ವಿಶೇಷಾಧಿಕಾರಿ"**ಯನ್ನಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 31 ಆರ್‌ಇಹೆಚ್ 2016; ದಿನಾಂಕ: 20.05.2016 ರನ್ವಯ ನೇಮಿಸಲಾಗಿರುತ್ತದೆ.

**"ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ"**ವನ್ನು ಸ್ಥಾಪಿಸಲು ಕರಡು ವಿಧೇಯಕವನ್ನು ಕರ್ನಾಟಕ ವಿಧಾನ ಮಂಡಲದ ಮುಂದೆ ಮಂಡಿಸಿ ಒಪ್ಪಿಗೆ ಪಡೆದು ಕಾಯ್ದೆ ರಚಿಸಬೇಕಾಗಿರುತ್ತದೆ. ಕರಡು ವಿಧೇಯಕವನ್ನು ಕರ್ನಾಟಕ ವಿಧಾನ ಮಂಡಲದ ಮುಂದೆ ಮಂಡಿಸಿ ಕಾಯ್ದೆ ರಚಿಸುವುದನ್ನು ಬಾಕಿ ಇಟ್ಟು, ಒಂದು ಕಾರ್ಯಾದೇಶ ಹೊರಡಿಸುವ ಮೂಲಕ ಬೆಂಗಳೂರು ನಿರ್ಮಾತೃ **"ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ"**ವನ್ನು ರಚಿಸಲು ಸರ್ಕಾರವು ತೀರ್ಮಾನಿಸಿದೆ.

ಇದರಿಂದ ಪ್ರಾಧಿಕಾರವು ಅಸ್ತಿತ್ವಕ್ಕೆ ಬಂದು ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಲು ಹಾಗೂ ಸ್ಮಾರಕಗಳು, ಪಾರಂಪರಿಕ ಕಟ್ಟಡಗಳ ಸಂರಕ್ಷಣೆ ಮತ್ತು ಅಭಿವೃದ್ಧಿಪಡಿಸಲು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಲು ಅನುಕೂಲವಾಗುವುದು.

ಈ ಹಿನ್ನೆಲೆಯಲ್ಲಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಕಂಇ 31 ಆರ್‌ಇಹೆಚ್ 2016, ಬೆಂಗಳೂರು, ದಿನಾಂಕ:14.10.2016**

ಬೆಂಗಳೂರು ನಿರ್ಮಾತೃ ನಾಡಪ್ರಭು ಕೆಂಪೇಗೌಡ ಸ್ಮಾರಕಗಳು, ಪಾರಂಪರಿಕ ಕಟ್ಟಡಗಳ ಸಂರಕ್ಷಣೆ ಮತ್ತು ಅಭಿವೃದ್ಧಿಗಾಗಿ, ಅದರ ಉದ್ದೇಶ, ಯೋಜನೆಗಳ ರೂಪಿಸುವಿಕೆಗೆ, ಆಡಳಿತ ವ್ಯವಸ್ಥೆ ಮತ್ತು ಶಾಸನಬದ್ಧ ಚೌಕಟ್ಟಿಗೆ ಒಳಗೊಂಡಂತೆ ಒಂದು ಅಧಿನಿಯಮವನ್ನು ಜಾರಿಗೆ ತರುವುದನ್ನು ಬಾಕಿ ಇಟ್ಟು ಸರ್ಕಾರವು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ **"ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ"**ವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿ ಆದೇಶಿಸಿದೆ.

| | | |
|---|---|---|
| 1 | ಮಾನ್ಯ ಮುಖ್ಯಮಂತ್ರಿಗಳು | ಅಧ್ಯಕ್ಷರು |
| 2 | ಕಂದಾಯ ಸಚಿವರು | ಸದಸ್ಯರು |
| 3 | ಕನ್ನಡ ಮತ್ತು ಸಂಸ್ಕೃತಿ ಸಚಿವರು | ಸದಸ್ಯರು |
| 4 | ಬೆಂಗಳೂರು ಗ್ರಾಮಾಂತರ ಲೋಕಸಭಾ ಸದಸ್ಯರು, ಬೆಂಗಳೂರು ನಗರವನ್ನು ಪ್ರತಿನಿಧಿಸುವ ಓರ್ವ ರಾಜ್ಯಸಭಾ ಸದಸ್ಯರು ಹಾಗೂ ಯಲಹಂಕ ಮತ್ತು ಮಾಗಡಿ ವಿಧಾನ ಸಭಾ ಕ್ಷೇತ್ರದ ಶಾಸಕರು | ಸದಸ್ಯರು |
| 5 | ಮಹಾ ಪೌರರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |

| | | |
|---|---|---|
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 8 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯರು |
| 9 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ | ಸದಸ್ಯರು |
| 10 | ಪ್ರಾಧಿಕಾರದ ಆಯುಕ್ತರು. | ಸದಸ್ಯ ಕಾರ್ಯದರ್ಶಿ |
| 11 | ರಾಜ್ಯ ಸರ್ಕಾರದಿಂದ ನಾಡಪ್ರಭು ಕೆಂಪೇಗೌಡರವರ ಇತಿಹಾಸ ಹಾಗೂ ಪರಂಪರೆಯಲ್ಲಿ ಅನುಭವ ಹೊಂದಿರುವ ಗರಿಷ್ಠ 02 ಜನರನ್ನು ಮೀರದಂತೆ ನೇಮಿಸಲ್ಪಡುವ ನಾಮ ನಿರ್ದೇಶಿತ ಅಧಿಕಾರೇತರ ಸದಸ್ಯರು. | ಸದಸ್ಯರು |

ಈ ಪ್ರಾಧಿಕಾರದ ವತಿಯಿಂದ ಕೆಂಪೇಗೌಡರ ಪಾರಂಪರಿಕ ತಾಣಗಳು ಮತ್ತು ಸ್ಮಾರಕಗಳನ್ನು ಸಂರಕ್ಷಿಸಿ ಅಭಿವೃದ್ಧಿಪಡಿಸಲು ಕ್ರಮ ಕೈಗೊಳ್ಳುವುದು. 2016-17ನೇ ಸಾಲಿನ ಆರ್ಥಿಕ ವರ್ಷದಲ್ಲಿ ಒದಗಿಸಿರುವ ಅನುದಾನದಿಂದ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಂಕರಗೌಡ ಸಿ. ದೊಡ್ಡಮನಿ**
ಸರ್ಕಾರದ ಉಪ ಕಾರ್ಯದರ್ಶಿ
(ಪುನರ್ವಸತಿ ಮತ್ತು ಪುನರ್‌ನಿರ್ಮಾಣ),
ಕಂದಾಯ ಇಲಾಖೆ.

## ಕಂದಾಯ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ : ಕಂಇ 31 ಆರ್‌ಇಹೆಚ್ 2016, ಬೆಂಗಳೂರು, ದಿನಾಂಕ: 20.10.2016.**

ಬೆಂಗಳೂರು ನಿರ್ಮಾತೃ ಕೆಂಪೇಗೌಡ ಸ್ಮಾರಕಗಳು, ಪಾರಂಪರಿಕ ಕಟ್ಟಡಗಳ ಸಂರಕ್ಷಣೆ ಮತ್ತು ಅಭಿವೃದ್ಧಿಗಾಗಿ ಅದರ ಉದ್ದೇಶ, ಯೋಜನೆಗಳ ರೂಪಿಸುವಿಕೆಗೆ ಆಡಳಿತ ವ್ಯವಸ್ಥೆ ಮತ್ತು ಶಾಸನಬದ್ಧ ಚೌಕಟ್ಟಿಗೆ ಒಳಗೊಂಡಂತೆ ಒಂದು ಅಧಿನಿಯಮವನ್ನು ಜಾರಿಗೆ ತರುವುದನ್ನು ಬಾಕಿ ಇಟ್ಟು 15 (ಹದಿನೈದು) ಸದಸ್ಯರನ್ನೊಳಗೊಂಡಂತೆ "**ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ**" ವನ್ನು ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಆರ್‌ಇಹೆಚ್ 2016, ದಿನಾಂಕ:14.10.2016ರನ್ವಯ ರಚಿಸಲಾಗಿರುತ್ತದೆ.

ಮುಂದುವರೆದು, ರಾಮನಗರ ಜಿಲ್ಲಾ ಉಸ್ತುವಾರಿ ಸಚಿವರನ್ನು "**ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ**"ದ ಉಪಾಧ್ಯಕ್ಷರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಿ ಆದೇಶಿಸಲಾಗಿದೆ.

**P.R. 660**
**SC-100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಂಕರಗೌಡ ಸಿ. ದೊಡ್ಡಮನಿ**
ಸರ್ಕಾರದ ಉಪ ಕಾರ್ಯದರ್ಶಿ
(ಪುನರ್ವಸತಿ ಮತ್ತು ಪುನರ್‌ನಿರ್ಮಾಣ),
ಕಂದಾಯ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವ ಯೋಜನೆಯನ್ನು 2013-14 ರಿಂದ 2016-17ನೇ ಸಾಲುಗಳಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ:ಆಇ 72 ಸಿಇಎಕ್ಸ್ 1984, ದಿನಾಂಕ 28/02/1985.
2) ಸರ್ಕಾರದ ಆದೇಶ ಸಂಖ್ಯೆ:ಆಇ 165 ಸಿಎಸ್‌ಓ 1994, ದಿನಾಂಕ 12/12/1994.
3) ಸರ್ಕಾರದ ಆದೇಶ ಸಂಖ್ಯೆ:ಆಇ 199 ಸಿಎಸ್‌ಎಲ್ 2004, ದಿನಾಂಕ 07/09/2004.
4) ಸರ್ಕಾರದ ಆದೇಶ ಸಂಖ್ಯೆ:ಆಇ 388 ಸಿಎಸ್‌ಎಲ್ 2005, ದಿನಾಂಕ 30/08/2005.
5) ಸರ್ಕಾರದ ಆದೇಶ ಸಂಖ್ಯೆ:ಆಇ 419 ಸಿಎಸ್‌ಎಲ್ 2006, ದಿನಾಂಕ 07/03/2007.
6) ಸರ್ಕಾರದ ಆದೇಶ ಸಂಖ್ಯೆ:ಆಇ 419 ಸಿಎಸ್‌ಎಲ್ 2007, ದಿನಾಂಕ 16/11/2007 ಮತ್ತು ದಿನಾಂಕ 14/08/2008.
7) ಸರ್ಕಾರದ ಆದೇಶ ಸಂಖ್ಯೆ:ಆಇ 73 ಸಿಎಸ್‌ಎಲ್ 2009, ದಿನಾಂಕ 21/04/2010.
8) ಸರ್ಕಾರದ ಆದೇಶ ಸಂಖ್ಯೆ:ಆಇ 160 ಸಿಎಸ್‌ಎಲ್ 2012, ದಿನಾಂಕ 07/09/2012.
9) ವಾಣಿಜ್ಯ ತೆರಿಗೆಗಳ ಆಯುಕ್ತರ ಪತ್ರ ಸಂಖ್ಯೆ:ವಾತೆಅಆ (ಗು&ಸ)/ ಉಆ/ಇತರೆ/ಹೆಚ್/ಸಿಆರ್-10/16-17, ದಿನಾಂಕ 20/07/2016.
10) ವಾಣಿಜ್ಯ ತೆರಿಗೆಗಳ ಆಯುಕ್ತರ ಪತ್ರ ಸಂಖ್ಯೆ:ವಾತೆಅಆ (ಗು&ಸ)/ಸಿಆರ್.10/2016-17/ಹೆಚ್, ದಿನಾಂಕ 19/11/2016.

**ಪ್ರಸ್ತಾವನೆ :**

ಮೇಲೆ (1)ರಿಂದ (8)ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ, ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವ ಯೋಜನೆಯನ್ನು ದಿನಾಂಕ 31/03/2013ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ (9) ಮತ್ತು (10)ರಲ್ಲಿ ಓದಲಾದ ಪತ್ರಗಳಲ್ಲಿ, ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವ ಯೋಜನೆಯನ್ನು 2013–14, 2014–15, 2015–16 ಮತ್ತು 2016–17ನೇ ಸಾಲುಗಳಿಗೂ ವಿಸ್ತರಿಸುವಂತೆ ವಾಣಿಜ್ಯ ತೆರಿಗೆಗಳ ಆಯುಕ್ತರು ಕೋರಿರುತ್ತಾರೆ ಹಾಗೂ ಈ ಮೊತ್ತವನ್ನು ಈಗಾಗಲೇ ನೀಡಲಾಗಿರುವ '2040-00-001-0-01-015–Subsidiary Expenses (SE)' ಲೆಕ್ಕ ಶೀರ್ಷಿಕೆಯಡಿ ಭರಿಸಲಾಗುವುದೆಂದು ಹಾಗೂ ಪ್ರಸ್ತುತ ಇಲಾಖೆಯಲ್ಲಿ ಕೇವಲ ಎರಡು ಅರ್ಜಿಗಳನ್ನು ಮಾತ್ರ ಸ್ವೀಕರಿಸಲ್ಪಟ್ಟಿದ್ದು, ಈ ಹಿಂದಿನ ಆದೇಶದಲ್ಲಿ ಯಾವುದೇ ಪ್ರಕರಣದಲ್ಲಿ ಒಟ್ಟು ಪುರಸ್ಕಾರ ಮೊತ್ತ ₹. 20,000/–ಕ್ಕೆ ಮೀರದಂತೆ ನಿಗದಿಗೊಳಿಸಿರುವುದರಿಂದ ಸರ್ಕಾರಕ್ಕೆ ಹೆಚ್ಚಿನ ಹೊರೆ ಆಗುವುದಿಲ್ಲವೆಂದೂ ಸಹ ತಿಳಿಸಿರುತ್ತಾರೆ.

ವಾಣಿಜ್ಯ ತೆರಿಗೆ ಇಲಾಖೆಯ ಆಯುಕ್ತರ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹಾಲೀ ಇರುವ ಪುರಸ್ಕಾರ ಯೋಜನೆಯನ್ನು 2013–14, 2014–15, 2015–16 ಮತ್ತು 2016–17ನೇ ಸಾಲುಗಳಿಗೂ ಕೂಡ ಮುಂದುವರೆಸಲು ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ : ಆಇ 85 ಸಿಎಸ್‌ಎಲ್ 2016, ಬೆಂಗಳೂರು, ದಿನಾಂಕ 07/12/2016**

ಆದೇಶ ಸಂಖ್ಯೆ:ಆಇ 165 ಸಿಎಸ್‌ಓ 94, ದಿನಾಂಕ 12/12/1994ರಲ್ಲಿ ನಮೂದಿಸಲಾದ ವಿಧಾನ ಮತ್ತು ಷರತ್ತುಗಳಿಗೊಳಪಟ್ಟಂತೆ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವ ಯೋಜನೆಯನ್ನು ದಿನಾಂಕ 01/04/2013ರಿಂದ 31/03/2017ರವರೆಗೆ ವಿಸ್ತರಿಸಿ ಈ ಕೆಳಗಿನಂತೆ ಆದೇಶಿಸಿದೆ.

(1) ಮಾಹಿತಿದಾರರಿಗೆ, ಇಲಾಖೆಯ ಎಲ್ಲಾ ಕಾಯ್ದೆಗಳಡಿಯಲ್ಲಿ ಬರುವ ವರ್ತಕರಿಗೆ ಸಂಬಂಧಿಸಿದಂತೆ ವಂಚಿತ ತೆರಿಗೆಯ ಶೇಕಡ 10ರಷ್ಟು ಮೊತ್ತವನ್ನು (₹. 20,000/–ಕ್ಕೆ ಮೀರದಂತೆ) ಪುರಸ್ಕಾರವಾಗಿ ನೀಡಬಹುದು.

(2) **ಪ್ರಾರಂಭಿಕ ಪುರಸ್ಕಾರ:** ವಾಣಿಜ್ಯ ತೆರಿಗೆ ಆಯುಕ್ತರು, ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಜಾರಿ), ದಕ್ಷಿಣ ವಲಯ, ಬೆಂಗಳೂರು, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಜಾಗೃತಿ)/(ಜಾರಿ)/(ಆಡಳಿತ) ಇವರುಗಳು ವಂಚನೆ ಪತ್ತೆ ಮಾಡಿದ ಕೂಡಲೇ ವಂಚಿತ ತೆರಿಗೆಯ ಶೇಕಡ 5ರಷ್ಟು ಮೊತ್ತವನ್ನು ಬಿಡುಗಡೆ ಮಾಡಬಹುದು.

(3) **ಅಂತಿಮ ಪುರಸ್ಕಾರ:** ವಾಣಿಜ್ಯ ತೆರಿಗೆ ಆಯುಕ್ತರು, ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಜಾರಿ), ದಕ್ಷಿಣ ವಲಯ, ಬೆಂಗಳೂರು, ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾಗೃತಿ)/(ಜಾರಿ)/(ಆಡಳಿತ) ಇವರುಗಳು ಪ್ರಕರಣವು ಅಂತಿಮ ಘಟ್ಟ ತಲುಪಿದ ನಂತರ ಅಂದರೆ ಮರುಕರನಿರ್ಧರಣೆ, ಮನವಿ, ಸ್ವಯಂ ಪರಿಷ್ಕರಣೆ, ಪುನ: ಮರುಕರನಿರ್ಧರಣೆ ಮುಗಿದು, ವಂಚಿಸಿದ ಪೂರ್ಣ ತೆರಿಗೆ ಮೇಲಿನ ಬಡ್ಡಿ ಹಾಗೂ ದಂಡ ವಸೂಲಿಯಾದ ನಂತರ (ಬಡ್ಡಿ ಮತ್ತು ದಂಡದ ಮೊತ್ತವನ್ನು ಹೊರತುಪಡಿಸಿ) ಉಳಿದ ಶೇಕಡ 5ರಷ್ಟು ಮೊತ್ತವನ್ನು (ಒಟ್ಟು ಪುರಸ್ಕಾರ ಮೊತ್ತ ₹. 20,000/–ಕ್ಕೆ ಮೀರದಂತೆ) ಬಿಡುಗಡೆ ಮಾಡಬಹುದು.

ಮೇಲಿನ ಕಂಡಿಕೆ (1), (2) ಮತ್ತು (3)ಗಳಲ್ಲಿ ನಮೂದಿಸಿರುವಂತೆ ಇಲಾಖೆಯ ಎಲ್ಲಾ ಕಾಯ್ದೆಗಳಡಿಯಲ್ಲಿ ಬರುವ ವರ್ತಕರಿಗೆ ಸಂಬಂಧಿಸಿದಂತೆ ಮಾಹಿತಿ ನೀಡುವ ಮಾಹಿತಿದಾರರಿಗೆ ಲೆಕ್ಕ ಶೀರ್ಷಿಕೆ '2040-00-001-0-01-015–Subsidiary Expenses (SE) ಅಡಿಯಲ್ಲಿ ಪುರಸ್ಕಾರದ ಮೊತ್ತವನ್ನು ನೀಡಬಹುದು.

**P.R. 661**

**SC-50**

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ [ವಾ.ತೆ–1].

## FINANCE SECRETARIAT

**Sub :** Constitution of a Committee to study and report changes to the Karnataka Tax on Professions, Trades, Callings and Employments Act, 1976, and Rules made thereunder.

**READ :** Letter No.PT/CR/7/2016-17, dated 19/09/2016 from the Commissioner, Commercial Taxes Department, Bengaluru.

**PREAMBLE :**

Government have proposed to constitute a Committee under the Chairmanship of the Additional Commissioner of Commercial Taxes to study and report changes to the Karnataka Tax on Professions, Trades, Callings and Employments Act, 1976, and Rules made thereunder in tune with business practices, commercial laws, and procedures so as to make the law citizen centric and hassle-free in view of the proposed introduction of Goods and Services Tax in the country which subsumes major taxes administered by the Commercial Taxes Department other than the Profession Tax. The Commissioner of Commercial Taxes, in his letter read above, has stated that as draft GST law is in public domain, it is time to bring changes to the existing Profession Tax and Rules which makes Professional Tax Law and Rules more transparent, citizen centric and hassle-free and also helps the Department to carry out structural re-organization of administration of Profession Tax along with the proposed GST law for effective implementation and smooth transition.

The said proposal has been examined and found that, it is necessary to formulate the Committee as suggested by the Commissioner of Commercial Taxes and also to refer the terms of reference to the Committee to study and report the changes required for the existing Profession Tax Law and Rules. Hence, the following order:

**Order No. FD 5 CPT 2016, Bengaluru, dated 04/10/2016**

As explained in the Preamble, Government are pleased to constitute a Committee under the Chairmanship of the Additional Commissioner of Commercial Taxes (Law & Policy), Office of the Commissioner of Commercial Taxes, Vanijya Therige Karyalaya, Kalidasa Road, Bengaluru - 560009. The Committee shall comprise the following Members:

| | | | |
|---|---|---|---|
| 1. | The Additional Commissioner of Commercial Taxes (Law & Policy) | - | Chairman |
| 2. | The Joint Commissioner of Commercial Taxes (Minor Acts), Bengaluru | - | Member |
| 3. | The Joint Commissioner of Commercial Taxes (Vigilance) | - | Member |
| 4. | The Joint Commissioner of Commercial Taxes (Admn.) DVO-1, Bengaluru | - | Member |
| 5. | The Joint Commissioner of Commercial Taxes (e-Audit), Bengaluru | - | Member |
| 6. | The Deputy Commissioner of Commercial Taxes (Audit) 3.6, DVO-3, Bengaluru | - | Member |
| 7. | The Sr. Technical Director, NIC, Bengaluru | - | Member |
| 8. | The Assistant Commissioner of Commercial Taxes (e-Governance)-1, Bengaluru | - | Member |
| 9. | The Assistant Commissioner of Commercial Taxes (E.I.U-2), Bengaluru | - | Member |
| 10. | Sri. Manohar B.T., Chairman, State Taxes Committee, FKCCI, Bengaluru | - | Member |
| 11. | Sri Venkataramani, Chartered Accountant, Bengaluru | - | Member |
| 12. | The Assistant Commissioner of Commercial Taxes (Public Relations Officer) | - | Member Secretary |

Terms of the Reference to the Committee are as follow:

1. The Committee shall study existing Karnataka Tax on Professions, Trades, Callings and Employments Act, 1976 and Rules made thereunder and suggest changes to the existing law and rules so as to make them citizen centric and hassle-free.
2. The Committee shall submit the report within six months.
3. The Committee shall submit draft law and rules and procedures along with the report by incorporating the suggestions and recommendations of the report for its implementation.
4. The Committee shall meet at its convenience at a place and time as decided by the Chairman.
5. The Committee may co-opt additional Members not exceeding three.
6. The Committee can call for the information / suggestions to study and submit the report.
7. The Assistant Commissioner of Commercial Taxes (Public Relations) who is Member-Secretary of the Committee will be the custodian of records and information.
8. The Committee shall submit the report to the Commissioner of Commercial Taxes.

**P.R 662**

By Order and in the Name of the Governor of Karnataka,

**K.S. Padmavathi**

Under Secretary to Government,

Finance Department (C.T-1).

## ಆರ್ಥಿಕ ಸಚಿವಾಲಯ

ವಿಷಯ : ಶ್ರೀಮತಿ ಮಂಜುಳಾಬಾಯಿ, ಪ್ರ.ದ.ಸ. ಕರ್ನಾಟಕ ರಾಜ್ಯ ವಿಮಾ ಇಲಾಖೆ, ಚಿತ್ರದುರ್ಗ, ಇವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂಖ್ಯೆ: ಆಇ 41 ಕವಿಇ 2010, ದಿನಾಂಕ:16.09.2014.

2) ವಿಚಾರಣಾಧಿಕಾರಿಯಾಗಿ ನೇಮಕ ಮಾಡಿದ ಕರ್ನಾಟಕ ಉಪಲೋಕಾಯುಕ್ತ ಇವರ ಆದೇಶ ಸಂಖ್ಯೆ: LOK/INQ/14-A/512/2014, ದಿನಾಂಕ: 22.09.2014.

3) ಅಪರ ನಿಬಂಧಕರು (ವಿಚಾರಣೆಗಳು–1), ಕರ್ನಾಟಕ ಲೋಕಾಯುಕ್ತ ಇವರ ವಿಚಾರಣಾ ವರದಿ ದಿನಾಂಕ:01.04.2016.

4) ಮಾನ್ಯ ಉಪಲೋಕಾಯುಕ್ತ–1 ರವರ ಶಿಫಾರಸ್ಸು ಮಾಡಿದ ಪತ್ರ ಸಂಖ್ಯೆ: LOK/ARE-1/ENQ-512/2014, ದಿನಾಂಕ: 07.04.2016.

5) ಆಪಾದಿತ ನೌಕರರಿಗೆ ಎರಡನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ: 27.04.2016.

6) ಎರಡನೇ ಕಾರಣ ಕೇಳುವ ನೋಟೀಸಿಗೆ ಆಪಾದಿತ ನೌಕರರು ನೀಡಿರುವ ಸಮಜಾಯಿಷಿ ದಿನಾಂಕ: 10.05.2016.

**ಪ್ರಸ್ತಾವನೆ :**

ಶ್ರೀಮತಿ ಮಂಜುಳಾ ಬಾಯಿ, ಪ್ರ.ದ.ಸ. ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರು ಚಿತ್ರದುರ್ಗದ ಜಿಲ್ಲಾ ವಿಮಾ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 03.08.2013 ರಂದು ಫಿರ್ಯಾದಿ ಶ್ರೀಮತಿ ಎಲ್. ಭಾರತಿ ಇವರು ಹೊಳಲ್ಕೆರೆಯ ಎಂ.ಎಂ.ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿದ್ದು, ಅವರಿಗೆ 55 ವರ್ಷ ಪೂರ್ಣವಾಗಿರುವ ಕಾರಣ ಪಾಲಿಸಿಯ ಮೊತ್ತವನ್ನು ಬಿಡುಗಡೆ ಮಾಡುವಂತೆ ಅರ್ಜಿ ಸಲ್ಲಿಸಿದ್ದು, ಪಾಲಿಸಿಯ ಮೊತ್ತವನ್ನು ಇತ್ಯರ್ಥಪಡಿಸಲು ದಿನಾಂಕ:31.01.2013ರಂದು ₹. 1900/– ಅಕ್ರಮ ಸಂಭಾವನೆ ಪಡೆದ ಆರೋಪಕ್ಕಾಗಿ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ : 16.09.2014ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರನ್ವಯ ಉಪ ಲೋಕಾಯುಕ್ತರಿಗೆ ವಹಿಸಲಾಯಿತು. ಉಪ ಲೋಕಾಯುಕ್ತರ ಮೇಲೆ (2)ರಲ್ಲಿ ಓದಲಾದ ದಿನಾಂಕ:22.09.2014ರ ಆದೇಶದಲ್ಲಿ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಪರ ನಿಬಂಧಕರು, ವಿಚಾರಣೆಗಳು–1 ಇವರ ಮೇಲೆ (3)ರಲ್ಲಿ ಓದಲಾದ ದಿನಾಂಕ: 01.04.2016ರ ವಿಚಾರಣಾ ವರದಿ ಸಲ್ಲಿಸಿ, ಆರೋಪ ಕುರಿತು ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ.

ಶಿಸ್ತುಪ್ರಾಧಿಕಾರದ ಪರ 1ನೇ ಸಾಕ್ಷಿಯಾಗಿ ಸಾಕ್ಷ್ಯ ನೀಡಿದ ಶ್ರೀ ಕೆ.ಹೆಚ್. ಜಯರಾಂ, ಫಿರ್ಯಾದುದಾರರ ಹೇಳಿಕೆಯಡಿ ಪತ್ನಿಯಾದ ಶ್ರೀಮತಿ ಎಲ್. ಭಾರತಿ, ಇವರು ಹೊಳಲಕೆರೆಯ ಎಂ.ಎಂ.ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿದ್ದು, ಅವರಿಗೆ 55 ವರ್ಷ ಪೂರ್ಣವಾಗಿರುವ ಕಾರಣ ಪಾಲಿಸಿಯ ಮೊತ್ತವನ್ನು ಬಿಡುಗಡೆ ಮಾಡುವಂತೆ ಅರ್ಜಿ ಸಲ್ಲಿಸಿದ್ದರು ಹಾಗೂ ಈ ಸಂಬಂಧ ಆರೋಪಿಯಾದ ಶ್ರೀಮತಿ ಮಂಜುಳಾಬಾಯಿ, ಪ್ರ.ದ.ಸ. ಇವರನ್ನು ಸಂಪರ್ಕಿಸಿದಾಗ ಪಾಲಿಸಿ ಮೊತ್ತವನ್ನು ಇತ್ಯರ್ಥಪಡಿಸಲು ₹. 3,000/–ಗಳಿಗೆ ಲಂಚದ ಬೇಡಿಕೆ ಇಟ್ಟು ನಂತರ, ಪಾಲಿಸಿ ಮೊತ್ತವನ್ನು ಇತ್ಯರ್ಥಪಡಿಸಲು ₹. 2,000/–ಗಳಿಗೆ ಒಪ್ಪಿದರು. ಈ ವಿಷಯವನ್ನು ಭಾರತಿ ಅವರು ಫಿರ್ಯಾದಿಗೆ ತಿಳಿಸಿದಾಗ ಅವರು ಲೋಕಾಯುಕ್ತ ಪೋಲೀಸ್ ಚಿತ್ರದುರ್ಗ, ಇಲ್ಲಿ ದೂರನ್ನು ದಾಖಲಿಸಿದರು. ಪೋಲೀಸರಿಂದ ನೀಡಲ್ಪಟ್ಟ ವಾಯ್ಸ್ ರೆಕಾರ್ಡರ್‌ನೊಡನೆ ಆರೋಪಿತರನ್ನು ಸಂಪರ್ಕಿಸಿ ₹. 1900/–ಕ್ಕೆ ಒಪ್ಪಿಸಿದರು. ನಂತರ ₹. 1900/–ಗಳು ಹಾಗೂ ವಾಯ್ಸ್ ರೆಕಾರ್ಡ್‌ರನ್ನು ಲೋಕಾಯುಕ್ತ ಪೋಲೀಸರಿಗೆ ತಿಳಿಸಿದರು.

ಫಿರ್ಯಾದಿಯು ನೀಡಿದ ₹. 1,900/–ಗಳ ನೋಟುಗಳಿಗೆ ಫಿನೋಲೋಪ್ತಲಿನ್ (phenolphthalein) ಪೌಡರ್ ಸಿಂಪಡಿಸಿ ಆರೋಪಿತರು ಕೇಳಿದಾಗ ಕೊಡುವಂತೆ ಅನಂತರ ಹೊರಗೆ ಬಂದು ಸನ್ನೆ ಮಾಡುವಂತೆ ಸೂಚನೆ ನೀಡಿದರು. ಅದರಂತೆ ಫಿರ್ಯಾದಿಯು ಆರೋಪಿಯ ಕಛೇರಿಗೆ ಹೋಗಿ ಆರೋಪಿತರನ್ನು ಭೇಟಿ ಮಾಡಿದಾಗ ಸದರಿ ಕಡತವು ಸಿದ್ಧವಾಗಿದೆಯೆಂದು ತಿಳಿಸಿ ಒಂದು ಲಕೋಟೆ ನೀಡಿ ಹಣವನ್ನು ಅದರಲ್ಲಿಟ್ಟು ಕೊಡಲು ಹೇಳಿದ ಮೇರೆಗೆ ನಂತರ 1ನೇ ಸಾಕ್ಷಿದಾರರು ಲಂಚದ ಮೊತ್ತವನ್ನು ಲಕೋಟೆಯಲ್ಲಿಟ್ಟು ಆರೋಪಿಗೆ ನೀಡಿದರು. ಆರೋಪಿಯು ಲಂಚದ ಮೊತ್ತವನ್ನು ತನ್ನ ಕೈಯಿಂದ ಎಣಿಸಿ ನಂತರ ಲಕೋಟೆಯಲ್ಲಿ ಇರಿಸಿಕೊಂಡರೆಂದು ನೆರಳು ಸಾಕ್ಷಿಯಾದ 2ನೇ ಸಾಕ್ಷಿದಾರರು ಗಮನಿಸಿದರು. ನಂತರ 1ನೇ ಸಾಕ್ಷಿದಾರರು ಹೊರಬಂದು ಪೋಲೀಸರಿಗೆ ಸಂಜ್ಞೆ ನೀಡಲಾಗಿ ಅವರು ಒಳಬಂದಾಗ ಆರೋಪಿಯನ್ನು ತೋರಿಸಿದರು. ನಂತರ ಲೋಕಾಯುಕ್ತ ಪೊಲೀಸರು 3ನೇ ಸಾಕ್ಷಿದಾರರ ಜೊತೆ ಕಛೇರಿಯೊಳಗೆ ಪ್ರವೇಶಿಸಿ, ಆರೋಪಿತರಿಂದ ಲಂಚದ ಹಣವನ್ನು ಸ್ವೀಕರಿಸಿ ಅದರ ಕ್ರಸಂ.ಗಳನ್ನು ದಾಖಲಿಸಿ, ನಂತರ ಫಿನೋಲೋಪ್ತಲಿನ್ (phenolphthalein) ಪೌಡರ್‌ನ್ನು ಸಿಂಪಡಿಸಿ ಆರೋಪಿತರ ಕೈಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಿಂದ ತೊಳೆಯಲಾಗಿ ದ್ರಾವಣವು ಗುಲಾಬಿ (Pink) ಬಣ್ಣಕ್ಕೆ ತಿರುಗಿತು. ಲಂಚದ ಹಣವನ್ನು ಆರೋಪಿಯಿಂದ ಪಡೆದು ಸಂಖ್ಯೆಗಳನ್ನು ಹೋಲಿಸಲಾಗಿ ಅವು ಹೊಂದಾಣಿಕೆಯಾದವು. ನಂತರ ಲೋಕಾಯುಕ್ತ ಪೊಲೀಸರು ಫೋಟೊಗಳನ್ನು ತೆಗೆದು ಮಹಾಜರ್‌ನ್ನು ಮಾಡಿದರು. ಅನಂತರ ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆದು ಆರೋಪಿತರ ವಿರುದ್ಧ ನ್ಯಾಯಾಲಯದಲ್ಲಿ ಚಾರ್ಜ್ ಶೀಟ್‌ನ್ನು ಸಲ್ಲಿಸಿರುತ್ತಾರೆ.

ವಿಚಾರಣಾ ಅವಧಿಯಲ್ಲಿ 1ನೇ ಸಾಕ್ಷಿದಾರರು ಆರೋಪಿಯಾದ ಶ್ರೀಮತಿ ಮಂಜುಳಾಬಾಯಿ ಅವರು ₹. 1,900/–ಗಳ ಲಂಚದ ಮೊತ್ತ ಪಡೆದಿರುವುದನ್ನು ಹಾಗೂ ಸಂಭಾಷಣೆಯನ್ನು ಮೈಕ್ರೋ ರೆಕಾರ್ಡ್‌ನಲ್ಲಿ ಧ್ವನಿಮುದ್ರಣ ಮಾಡಿ ನಂತರ ಲೋಕಾಯುಕ್ತ ಪೊಲೀಸರಿಗೆ ನೀಡಿರುವುದಾಗಿ ಖಚಿತಪಡಿಸಿರುತ್ತಾರೆ.

2ನೇ ಸಾಕ್ಷಿದಾರರಾದ ಶ್ರೀಮತಿ ಹೆಚ್. ಮುಬಿನಾ ಕೌಸರ್ ಇವರು ನೆರಳು ಸಾಕ್ಷಿದಾರರಾಗಿದ್ದು, ಅವರೂ ಸಹ ಆರೋಪಿಯು ₹. 1,900/–ಗಳನ್ನು ಪಡೆದಿರುವುದನ್ನು ಖಚಿತಪಡಿಸಿದರು. ಆರೋಪಿಯು ವಿಚಾರಣಾ ಅವಧಿಯಲ್ಲಿ ತನ್ನ ಮೇಲೆ ಸುಳ್ಳು ಆರೋಪದ ಮೇಲೆ ಸಿಲುಕಿಸಲಾಗಿದೆ ಎಂದು ಹಾಗೂ ಶ್ರೀ ಹೆಚ್. ಜಯರಾಂರವರು ದಿನಾಂಕ:30.01.2013ರಂದು ತನ್ನ ಪತ್ನಿಯ ವಿಮಾ ಪಾಲಿಸಿ ಮೊತ್ತದ ಬಗ್ಗೆ ವಿಚಾರಿಸಲು ಬಂದಿದ್ದರೆಂದು ತಿಳಿಸಿದ್ದು, ನಂತರ ಆರೋಪಿಯು ವಿಮಾ ಪಾಲಿಸಿಯ ಕಡತವನ್ನು ಇತ್ಯರ್ಥಗೊಳಿಸಿದ್ದು, ಕಡತವನ್ನು ದಿನಾಂಕ:11.01.2013ರಂದು ಮುಂದಿನ ಆದೇಶಕ್ಕಾಗಿ ಅಧೀಕ್ಷಕರಿಗೆ ಕಳುಹಿಸಲಾಗಿ ತನ್ನ ಬಳಿ ಫಿರ್ಯಾದುದಾರರ ಯಾವುದೇ ಕೆಲಸವು ಟ್ರ್ಯಾಪ್ ನಡೆದ ದಿನಾಂಕದಂದು ಬಾಕಿಯಿಲ್ಲವೆಂದು ತಿಳಿಸಿರುತ್ತಾರೆ. ಮುಂದುವರೆದು, ದಿನಾಂಕ:30.01.2013ರಂದು ಫಿರ್ಯಾದುದಾರರು ತನ್ನ ಕಛೇರಿಗೆ ಬಂದು ಅವರ ಕೈಚೀಲ ಕಳೆದುಹೋಗಿರುವುದರಿಂದ, ದಾವಣಗೆರೆಗೆ ಹೋಗಲು ತನಗೆ ದುಡ್ಡಿನ

ಅವಶ್ಯಕತೆಯಿದೆ ಎಂದು ತಿಳಿಸಿದ್ದರಿಂದ, ಆಕೆ ಫಿರ್ಯಾದುದಾರರಿಗೆ ₹. 1,900/–ಗಳನ್ನು ನೀಡಿದರೆಂದು ಹಾಗೂ ದಿನಾಂಕ:31.01.2013ರಂದು ಮೊತ್ತವನ್ನು ಹಿಂದಿರುಗಿಸುವುದಾಗಿ ಫಿರ್ಯಾದುದಾರರು ತಿಳಿಸಿ, ನಂತರ ದಿನಾಂಕ:31.01.2013ರಂದು ತಮಗೆ ನೀಡಬೇಕಾದ ಮೊತ್ತವನ್ನು ಹಿಂದಿರುಗಿಸಿದರು ಎಂದು ಆರೋಪಿಯು ತಿಳಿಸಿರುತ್ತಾರೆ.

ಎಲ್ಲಕ್ಕಿಂತ ಮಿಗಿಲಾಗಿ ತನಿಖಾಧಿಕಾರಿಯಾಗಿ ಕಾರ್ಯನಿರ್ವಹಿಸಿದ 3ನೇ ಸಾಕ್ಷಿದಾರರು ಲೋಕಾಯುಕ್ತ ಪೊಲೀಸ್ ಇನ್ಸ್‌ಪೆಕ್ಟರ್ ಅವರು ನೀಡಿದ ಹೇಳಿಕೆಯಂತೆ ಫಿರ್ಯಾದುದಾರರು ದಿನಾಂಕ:30.01.2013ರಂದು ತನ್ನ ಕಛೇರಿಗೆ ಬಂದು ಆರೋಪಿಯಾದ ಶ್ರೀಮತಿ ಮಂಜುಳಾಬಾಯಿ, ಇವರು ಪಾಲಿಸಿ ಮೊತ್ತವನ್ನು ಇತ್ಯರ್ಥಪಡಿಸಲು ತನಗೆ ಲಂಚದ ಬೇಡಿಕೆ ಇಟ್ಟಿರುವುದಾಗಿ ದೂರು ನೀಡಿದ ಮೇಲೆ ಅದನ್ನು ಖಚಿತಪಡಿಸುವ ಸಲುವಾಗಿ ಆತನಿಗೆ ಮೈಕ್ರೊ ರೆಕಾರ್ಡ್ ನೀಡಿ ಕಛೇರಿಗೆ ಹೋಗಿ ಸಂಭಾಷಣೆಯನ್ನು ಧ್ವನಿಮುದ್ರಣ ಮಾಡಿ ತರುವಂತೆ ತಿಳಿಸಿದರು. ಅದರಂತೆ ಫಿರ್ಯಾದುದಾರರು ಧ್ವನಿಮುದ್ರಿತ ಕ್ಯಾಸೆಟ್‌ನ್ನು ಹಾಜರುಪಡಿಸಲಾಗಿ ಆಪಾದಿತರ ಮೇಲೆ ದೂರನ್ನು ದಾಖಲಿಸಿದರು. ಎಲ್ಲಾ ಔಪಚಾರಿಕ ಕ್ರಿಯೆಗಳನ್ನು ನಡೆಸಿ ಫಿರ್ಯಾದಿಯವರಿಗೆ ಹಣವನ್ನು ನೀಡಿ ನಂತರ ಟ್ರ್ಯಾಪ್ ನಡೆದ ಕುರಿತು ವಿವರಿಸಿದ್ದಾರೆ. ಅನಂತರ ತನಿಖಾಧಿಕಾರಿಯಾಗಿ ಕಾರ್ಯನಿರ್ವಹಿಸಿದ 3ನೇ ಸಾಕ್ಷಿದಾರರು ಕೂಡ ಕ್ಯಾಸೆಟ್ ವಶಪಡಿಸಿಕೊಂಡು ಸಾಕ್ಷಿಗಳ ಹೇಳಿಕೆಯನ್ನು ದಾಖಲಿಸಿ ತರುವಾಯ ನ್ಯಾಯಾಲಯಕ್ಕೆ ಸಾಕ್ಷಿ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

ಹೀಗೆ ಎಲ್ಲಾ ಸಾಕ್ಷಿಗಳೂ ಸಹ ಆರೋಪಿಯು ಅಕ್ರಮ ಸಂಭಾವನೆ ಪಡೆದಿರುವುದನ್ನು ದೃಢಪಡಿಸಿದ್ದಾರೆ. ಅದರಲ್ಲೂ 1ನೇ ಮತ್ತು 3ನೇ ಸಾಕ್ಷಿಗಳು ಆರೋಪಿಯು ಲಂಚ ಸ್ವೀಕರಿಸಿರುವುದನ್ನು ಸ್ಪಷ್ಟವಾಗಿಯೇ ತಿಳಿಸಿದ್ದಾರೆ.

ಮೇಲ್ಕಂಡಂತೆ ವಿವರಿಸಿರುವಂತೆ, ವಿಚಾರಣಾಧಿಕಾರಿಗಳು ಆರೋಪಿಯ ಬಗ್ಗೆ ತನ್ನ ನಿರ್ಣಯದಲ್ಲಿ ದಾಖಲೆ ಪಿ–1 ಅನುಸಾರ ದೂರನ್ನು ನೀಡಿರುವುದನ್ನು ಶಿಸ್ತು ಪ್ರಾಧಿಕಾರದ ಪರವಾಗಿರುವ 1ನೇ ಸಾಕ್ಷಿದಾರರು ಒಪ್ಪಿಕೊಂಡಿರುತ್ತಾರೆ. ಸದರಿ ದೂರಿನ ಅನುಸಾರ 1ನೇ ಸಾಕ್ಷಿದಾರರು ಆರೋಪಿಯನ್ನು ಭೇಟಿ ಮಾಡಿ ತನ್ನ ಪತ್ನಿಯ ವಿಮಾ ಪಾಲಿಸಿ ಮೊತ್ತದ ಇತ್ಯರ್ಥಕ್ಕಾಗಿ ಕೋರಲಾಗಿ ಆರೋಪಿಯು ಪಾಲಿಸಿ ಮೊತ್ತವನ್ನು ಇತ್ಯರ್ಥಪಡಿಸಲು ಲಂಚದ ಬೇಡಿಕೆ ಇಟ್ಟಿರುವುದಾಗಿ ದೂರು ನೀಡಿದ ಹಿನ್ನೆಲೆಯಲ್ಲಿ ಅದನ್ನು ಖಚಿತಪಡಿಸುವ ಸಲುವಾಗಿ ತನಿಖಾಧಿಕಾರಿಯವರು ಫಿರ್ಯಾದುದಾರಿಂದ ದೂರು ತೆಗೆದುಕೊಳ್ಳುವ ಮುನ್ನ ಅವರಿಗೆ ಟೇಪ್ ರೆಕಾರ್ಡ್‌ನ್ನು ಕೊಟ್ಟು ಆರೋಪಿತನೊಂದಿಗಿನ ಸಂಭಾಷಣೆಯನ್ನು ರೆಕಾರ್ಡ್ ಮಾಡಿದ ನಂತರ 1ನೇ ಸಾಕ್ಷಿದಾರರು ದೂರನ್ನು ದಾಖಲಿಸಿರುತ್ತಾರೆ. 2ನೇ ಮತ್ತು 3ನೇ ಸಾಕ್ಷಿಗಳ ಹೇಳಿಕೆಯು ಆರೋಪಿಯು ಲಂಚದ ಹಣಕ್ಕಾಗಿ ಬೇಡಿಕೆ ಇಟ್ಟಿರುವುದು ದೂರು ದಾಖಲೆ ಪಿ–1 ಇಂದ ತಿಳಿಯುತ್ತದೆ ಹಾಗೂ ಆರೋಪಿಯು ಫಿರ್ಯಾದುದಾರರ ಕೆಲಸವನ್ನು ಮಾಡಿಕೊಡಲು ಲಂಚದ ಬೇಡಿಕೆ ಇಟ್ಟಿರುವುದನ್ನು ಸಾಕ್ಷಿಗಳ ಆಧಾರದ ಮೇಲೆ ಅದರಲ್ಲೂ 1ನೇ ಮತ್ತು 3ನೇ ಸಾಕ್ಷಿದಾರರ ಸಾಕ್ಷ್ಯದ ಅನುಸಾರ ಆರೋಪಿಯು ಟ್ರ್ಯಾಪ್ ವೇಳೆಯಲ್ಲಿ ಲಂಚದ ಹಣ ₹. 1,900/–ಗಳನ್ನು ಸ್ವೀಕರಿಸಿದ್ದು, ಆರೋಪ ಸಾಬೀತಾಗಿದೆ.

ಈ ವಿಚಾರಣಾ ವರದಿಯನ್ನು ಪರಿಶೀಲಿಸಿದ ಮಾನ್ಯ ಉಪ ಲೋಕಾಯುಕ್ತ–1, ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ.07.04.2016ರ ವರದಿ ಸಲ್ಲಿಸಿ, ಶ್ರೀಮತಿ ಮಂಜುಳಾಬಾಯಿ, ಪ್ರ.ದ.ಸ. ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಚಿತ್ರದುರ್ಗ, ಇವರ ಬಗ್ಗೆ ಶಿಫಾರಸ್ಸು ನೀಡಿದರು. ವಿಚಾರಣಾ ವರದಿ ಮತ್ತು ಉಪಲೋಕಾಯುಕ್ತ–1 ಅವರ ಶಿಫಾರಸ್ಸಿನೊಡನೆ ಮೇಲೆ(5)ರಲ್ಲಿ ಓದಲಾದ ದಿನಾಂಕ.27.04.2016ರ ಎರಡನೇ ಕಾರಣ ಕೇಳುವ ನೋಟೀಸನ್ನು ಆಪಾದಿತ ನೌಕರರಾದ ಶ್ರೀಮತಿ ಮಂಜುಳಾ ಬಾಯಿ ಪ್ರ.ದ.ಸ.,ರವರಿಗೆ ನೀಡಿ ಅವುಗಳ ಬಗ್ಗೆ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

ಇದಕ್ಕೆ ಮೇಲೆ ಕ್ರಮ ಸಂಖ್ಯೆ(6)ರಲ್ಲಿ ಓದಲಾದ ದಿನಾಂಕ.10.05.2016ರ ಉತ್ತರದಲ್ಲಿ ಆರೋಪಿತ ಶ್ರೀಮತಿ ಮಂಜುಳಾಬಾಯಿ, ಪ್ರ.ದ.ಸ., ರವರು ಈ ಕೆಳಕಂಡ ಅಹವಾಲು ಸಲ್ಲಿಸಿದ್ದಾರೆ :

- ವಿಚಾರಣಾಧಿಕಾರಿಗಳ ನಿರ್ಣಯವನ್ನು ಕಾನೂನಿನಲ್ಲಿ ಒಪ್ಪಲು ಸಾಧ್ಯವಿಲ್ಲ ಹಾಗೂ ಅದರ ಆಧಾರದ ಮೇಲೆ ಮುಂದುವರಿಯಲು ಅರ್ಹವಲ್ಲ.
- ವಿಚಾರಣಾಧಿಕಾರಿಗಳು ಪ್ರಾ.ಸಾ.–1 ರಿಂದ 3ರವರೆಗಿನ ಸಾಕ್ಷಿಗಳನ್ನು ಮಾತ್ರ ಪರಿಶೀಲನೆಗೆ ಒಳಪಡಿಸಿದ್ದು, ಅದರಲ್ಲಿ ದೂರದಾರರು, ನೆರಳು ಸಾಕ್ಷಿ ಮತ್ತು ತನಿಖಾಧಿಕಾರಿ ಇರುತ್ತಾರೆ. ಈ ಮೂವರು ಸಾಕ್ಷಿಗಳು ಸಹ ಆಸಕ್ತಿ ಸಾಕ್ಷಿದಾರರಾಗಿದ್ದು, ಅವರ ಹೇಳಿಕೆಯು ಅಂಗೀಕಾರ ಅರ್ಹವಲ್ಲವೆಂದು ಹಾಗೂ ವಿಚಾರಣಾಧಿಕಾರಿಯವರು ಅಭಿಯೋಗ ಪರ, ಲೋಕಾಯುಕ್ತ ಪರ ಸಾಕ್ಷಿ ಆಧಾರಗಳು ಹಾಗೂ ದಾಖಲೆಗಳ ಮೇಲೆ ಅವಲಂಬಿತರಾಗಿದ್ದು, ಇತರೆ ಕಾನೂನಾತ್ಮಕ ಅಂಶಗಳಿಗೆ ಗಮನ ನೀಡದೆ ಕೇವಲ ತನಿಖಾಧಿಕಾರಿಯಂತೆಯೇ ವರದಿ ನೀಡಿದ್ದಾರೆ.
- ಈ ಪ್ರಕರಣದ ವಾಸ್ತವಾಂಶಗಳ ಮೇಲೆ ವಿಚಾರಣಾಧಿಕಾರಿಯವರು ವಿಚಾರಣೆ ಮಾಡದೆ ಹಾಗೂ ಸ್ವತಂತ್ರವಾಗಿ ತಮ್ಮ ವಿವೇಚನೆಯನ್ನು ಉಪಯೋಗಿಸದೇ ತಾನು ಮುಗ್ದವೆನಿಸುವುದಕ್ಕೆ ದಾಖಲೆಗಳು ಹಾಗೂ ಮೌಖಿಕ ಸಾಕ್ಷಿಗಳು ಇದ್ದರೂ ಸಹ ತನಿಖಾ ಅಂಶಗಳನ್ನು ಮೀರಿರುತ್ತಾರೆ.
- ಈ ಪ್ರಕರಣದಲ್ಲಿ ದೂರುದಾರರಾದ ಶ್ರೀ ಕೆ.ಹೆಚ್. ಜಯರಾಂರವರ ಕೆಲಸವು ತಮ್ಮ ಬಳಿಯಾಗಲೀ ಅಥವಾ ಕೆ.ಜಿ.ಐ.ಡಿ., ಚಿತ್ರದುರ್ಗದ ಕಚೇರಿಯಲ್ಲಾಗಲೀ ಬಾಕಿ ಇರಲಿಲ್ಲ ಹಾಗೂ ತಾನು ಫಿರ್ಯಾದುದಾರರಿಗೆ ಅಧಿಕೃತವಾಗಿ ಸಹಕರಿಸುವ ಯಾವುದೇ ಒಂದು ಸ್ಥಿತಿಯಲ್ಲಿ ಇರಲಿಲ್ಲ. ದಾಖಲೆಗಳ ಅನುಸಾರ ಈ ಪ್ರಕರಣದ ಫಲಾನುಭವಿ ಶ್ರೀಮತಿ ಎಲ್.ಭಾರತಿ ಅವರನ್ನು ವಿಚಾರಣಾಧಿಕಾರಿಯವರು ವಿಚಾರಣೆಗೆ ಒಳಪಡಿಸಿರುವುದಿಲ್ಲ.
- ಮಾನ್ಯ Principal District and Sessions Judge and Special Judge Court, ಚಿತ್ರದುರ್ಗದಲ್ಲಿರುವ ವಿಶೇಷ ಪ್ರಕರಣ ಸಂ.4/2016ರಲ್ಲಿ ಕೆ.ಜಿ.ಐ.ಡಿ. ಉಪ ನಿರ್ದೇಶಕರಾದ ಶ್ರೀ ವಿಜಯಕುಮಾರ್‌ರವರು ಹಾಗೂ ಚಿದಾನಂದ ಮೂರ್ತಿ, ತುಮಕೂರು ಜಿಲ್ಲಾ ವಿಮಾ ಕಚೇರಿ, ಇವರುಗಳನ್ನು ದೋಷಾರೋಪಣಾ ಪಟ್ಟಿಯಲ್ಲಿ ಸಾಕ್ಷಿದಾರರು CW–5 & 6 ಎಂದು ಅನುಕ್ರಮವಾಗಿ ಗುರುತಿಸಲಾಗಿದೆ. ಈ ಇಬ್ಬರೂ ಸಾಕ್ಷಿದಾರರು ತಮ್ಮ ಸಾಕ್ಷಿಯಲ್ಲಿ ಶ್ರೀಮತಿ ಎಲ್. ಭಾರತಿರವರಿಗೆ ಸಂಬಂಧಿಸಿದ ವಿಮಾ ಪಾಲಿಸಿಯ ಕಡತಗಳನ್ನು ತಾನು ಸಕಾಲದೊಳಗೆ ನಿರ್ವಹಿಸಿರುತ್ತೇನೆ ಹಾಗೂ ಮೇಲಾಧಿಕಾರಿಗಳಿಗೆ ಮುಂದಿನ ಕ್ರಮಕ್ಕಾಗಿ ಕಳುಹಿಸಿರುತ್ತೇನೆ.

ಏಕೆಂದರೆ ಆದೇಶಗಳನ್ನು ಮಾಡಲು, ಸಂಬಂಧಿಸಿದ ವಿಮಾ ಪಾಲಿಸಿಗಳ ಚೆಕ್ಕುಗಳನ್ನು ವಿತರಿಸಲು ತಾನು ಅಧಿಕೃತ ವ್ಯಕ್ತಿಯಾಗಿರುವುದಿಲ್ಲವೆಂದು ಸಾಕ್ಷ್ಯ ನುಡಿದಿದ್ದಾರೆ.

- ತನಿಖಾಧಿಕಾರಿಗಳು ಸಲ್ಲಿಸಿರುವ ದಾಖಲೆಗಳನುಸಾರ ಶ್ರೀಮತಿ ಎಲ್. ಭಾರತಿರವರು ಮೂಲ ಫಲಾನುಭವಿಯಾಗಿದ್ದು, ಅವರು ಮೂರು ಪಾಲಿಸಿಗಳನ್ನು ವಿಮಾಧಿಕಾರಿ, ವಿಮಾ ಇಲಾಖೆ, ಚಿತ್ರದುರ್ಗ ಇವರಿಗೆ ವಿಳಾಸಿಸಿರುತ್ತಾರೆ. ಅದೇ ದಿನವೇ ದಾಖಲೆಗಳನ್ನು ದಾಖಲಾತಿ ಕೊಠಡಿಯಿಂದ ಕರೆಯಲಾಗಿದ್ದು, ಆ ಪಾಲಿಸಿಗಳು ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ಮಾಡಿಸಲಾಗಿದ್ದು, ಚಿತ್ರದುರ್ಗ ದಾಖಲಾತಿ ಕೊಠಡಿಯಲ್ಲಿ ಅವುಗಳು ಲಭ್ಯವಿಲ್ಲದಿರುವುದರಿಂದ ಸಂಬಂಧಪಟ್ಟ ಅಧಿಕಾರಿಗಳಿಗೆ ದಾಖಲೆಗಳನ್ನು ಕಳುಹಿಸುವಂತೆ ಅಧಿಕೃತವಾಗಿ ಕೋರಲಾಗಿರುತ್ತದೆ. ಈ ಮದ್ಯೆ ತಾನು ಕಣ್ಣಿನ ಶಸ್ತ್ರ ಚಿಕಿತ್ಸೆಗಾಗಿ ವೈದ್ಯಕೀಯ ರಜೆ ಪಡೆದಿದ್ದು, ರಜೆಯಿಂದ ಬಂದ ನಂತರ ಶ್ರೀಮತಿ ಎಲ್. ಭಾರತಿರವರ ಪಾಲಿಸಿಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸ್ವೀಕರಿಸಿದ್ದು, (ಹಿಂಬರಹ ದಿ.31/12/2012) ತದನಂತರ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿ ಕಡತದ ಮೂಲಕ ಉನ್ನಾತಾಧಿಕಾರಿಗಳಿಗೆ ಮುಂದಿನ ಕ್ರಮಕ್ಕಾಗಿ ದಿ.11/1/2016ರ ಷರಾ ಬರೆದು ಕಳುಹಿಸಿರುತ್ತೇನೆ. ವಿಚಾರಣಾ ಅಧಿಕಾರಿಯವರು ವಿಚಾರಣಾ ವರದಿಯಲ್ಲಿ ಶ್ರೀಮತಿ ಎಲ್. ಭಾರತಿರವರ ಪಾಲಿಸಿಗಳಿಗೆ ಸಂಬಂಧಿಸಿದಂತೆ ದಿ. 11/1/2013ರಿಂದ 31/1/2013ರವರೆಗೆ ಏನು? ಏನಾಗಿದೆ? ಎಂಬುದರ ಬಗ್ಗೆ ತನಿಖೆಯು ನಿಶ್ಯಬ್ದವಾಗಿರುತ್ತದೆ ಎಂದು; ಹಾಗೂ ಆರೋಪಿತರು ಅವರ ಪಾಲಿನ ಕೆಲಸವನ್ನು ನಿರ್ವಹಿಸಿ, ಮೇಲಾಧಿಕಾರಿಗಳಿಗೆ ಸೂಕ್ತ ಆದೇಶಕ್ಕೆ ಸಲ್ಲಿಸಲಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಹೀಗಿದ್ದೂ ತನ್ನ ವಿರುದ್ಧ ಮೋಸದ ಜಾಲವನ್ನು ಸುಳ್ಳು ಟ್ರ್ಯಾಪ್ ಮೂಲಕ ಮಾಡಲಾಗಿದೆ.
- ದಿ.31/3/2013 ರಂದು ಫಲಾನುಭವಿಯಾದ ಶ್ರೀಮತಿ ಎಲ್. ಭಾರತಿರವರಿಂದ ಸಲ್ಲಿಸಿದ ಯಾವುದೇ ಅಧಿಕೃತ ಕೆಲಸವು ತನ್ನ ಬಳಿ ಬಾಕಿ ಇರಲಿಲ್ಲ. ಈ ಪ್ರಕರಣವನ್ನು ಕೈಬಿಡಲು ಈ ಒಂದು ಸಾಕ್ಷಿಯು ಸಾಕು.
- ವಿಚಾರಣಾಧಿಕಾರಿ ಅವರು ನಿಜವಾದ ಅಂಶಗಳ ಬಗ್ಗೆ ಪರಿಶೀಲಿಸದೆ ಔಪಚಾರಿಕ ದೋಷಾರೋಪಣೆ ಪಟ್ಟಿ ಹಾಗೂ ಲೋಕಾಯುಕ್ತದ ತನಿಖೆ ವರದಿಗೆ ಒಪ್ಪಿಗೆ ನೀಡಿರುತ್ತಾರೆ.
- ಫಿರ್ಯಾದುದಾರರಾಗಲೀ, ನೆರಳು ಸಾಕ್ಷಿಯಾಗಲೀ ಅಥವಾ ತನಿಕಾಧಿಕಾರಿಯಾಗಲೀ ತನ್ನ ಟೇಬಲ್ ಡ್ರಾಯರ್‌ನಲ್ಲಿ ಅಕ್ರಮ ಸಂಭಾವನೆಯ ಮೊತ್ತವನ್ನು ತಾವು ಇಟ್ಟೆವೆಂದು ಸಾಕ್ಷ್ಯ ನುಡಿದಿರುವುದಿಲ್ಲ. ಹಾಗೂ ಸದರಿ ದೋಷಪೂರಿತ ಹಣ ಲಭ್ಯವಾದ ಟೇಬಲ್ ಡ್ರಾಯರ್‌ನಲ್ಲಿ ಲಾಕಿಂಗ್ ವ್ಯವಸ್ಥೆ ಕೀಲಿಯೊಂದಿಗೆ ಇರಲಿಲ್ಲ ಹಾಗೂ ಅದು ತನ್ನ ಸ್ವಾಧೀನದಲ್ಲಿ ಇತ್ತೆಂದು ರುಜುವಾತಾಗಿರುವುದಿಲ್ಲ. ಆದುದರಿಂದ, ಈ ವಿಚಾರಣೆ ವರದಿಯು ಅಂಗೀಕಾರಾರ್ಹವಲ್ಲ.
- ದಿನಾಂಕ:04.10.2012ರಂದು ಮೇಲಿನ ಕ್ಲೇಂಗಳನ್ನು ಇತ್ಯರ್ಥಗೊಳಿಸಲು ಕೋರಿ ಅರ್ಜಿ ಸಲ್ಲಿಸಲಾಗಿತ್ತು, ಇದರಲ್ಲಿ ಆಗುವ ವಿಳಂಬವು ಸಂಬಂಧಪಟ್ಟ ದಾಖಲೆಗಳು ಲಭ್ಯವಿಲ್ಲದಿದ್ದರಿಂದಾಗಿ ಉಂಟಾಗಿದ್ದು, ತಾನಾಗಲೀ ತನ್ನ ಇಲಾಖೆಯಾಗಲೀ ತಪ್ಪಿತಸ್ಥರಲ್ಲ.
- ಸದರಿ ಆರೋಪಿತ ಟ್ರ್ಯಾಪ್‌ನ್ನು ಊಟದ ವೇಳೆಯಲ್ಲಿ ಮಾಡಲಾಗಿದ್ದು ಮಹಜರನ್ನು ಆಗ ಸಿದ್ಧಪಡಿಸಲಾಗಿರುವುದರಿಂದ ತನ್ನ ಮತ್ತು ಕಛೇರಿ ಸಿಬ್ಬಂದಿಯು ಗೈರನ್ನು ಈ ರೀತಿ ಊಟದ ವೇಳೆಯಲ್ಲಿ ಬಳಸಿಕೊಂಡು ಮಾಡಲಾಗಿರುತ್ತದೆ. ಅಕ್ರಮ ಸಂಭಾವನೆಯ ಹಣವನ್ನು ಇಡಲಾದ ಟೇಬಲ್ ಡ್ರಾಯರ್‌ನಲ್ಲಿ ಲಾಕಿಂಗ್ ವ್ಯವಸ್ಥೆ ಇರಲಿಲ್ಲ. ಟೇಬಲ್ ಡ್ರಾಯರ್‌ನಲ್ಲಿ ಫಿರ್ಯಾದುದಾರರು ತನಿಖಾಧಿಕಾರಿಯ ನಿರ್ದೇಶನದಂತೆ ಹಣ ಇರಿಸಿದ್ದು, ಇದಕ್ಕೆ ನೆರಳು ಸಾಕ್ಷಿಯೂ ಸಹ ಸಹಕರಿಸಿರುವ ಸಾಧ್ಯತೆಯೂ ತಳ್ಳಿಹಾಕಲಾಗುವುದಿಲ್ಲ. ವಿಚಾರಣಾ ವರದಿಯು ಪಿ.ಡಬ್ಲ್ಯೂ–1 ರಿಂದ 3 ರಲ್ಲಿನ ಹೇಳಿಕೆಯ ಮೇಲೆ ಅವಲಂಬಿತವಾಗಿದ್ದು ಆ ಸಾಕ್ಷಿಯು ಒಪ್ಪಲು ಅರ್ಹರಲ್ಲ. ಇದೇ ಆರೋಪ ಹೊರಿಸಿ ಲೋಕಾಯುಕ್ತ ಪೋಲೀಸರು ವಿಶೇಷ ನ್ಯಾಯಾಲಯದಲ್ಲಿ ತಮ್ಮ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ (ಪಿ.ಸಿ) 412014ನ್ನು ಹೂಡಿದ್ದು, ಅದು ಇನ್ನೂ ವಿಚಾರಣೆಯಲ್ಲಿದೆ. ಈಗ ವಿಚಾರಣೆ ನಡೆಸುವುದು ಸೂಕ್ತವಲ್ಲ. ಈ ಎಲ್ಲಾ ಕಾರಣಗಳಿಂದಾಗಿ ವಿಚಾರಣಾ ವರದಿ ಹಾಗೂ ಉಪಲೋಕಾಯುಕ್ತ–1 ರವರ ಶಿಫಾರಸ್ಸನ್ನು ಒಪ್ಪಿಕೊಳ್ಳದೇ ತಮ್ಮನ್ನು ಆರೋಪಮುಕ್ತರನ್ನಾಗಿಸಲು ಕೋರಿದ್ದಾರೆ. ಪ್ರಕರಣವನ್ನು ಮತ್ತೆ ಪರಿಶೀಲಿಸಿದೆ.
- ಸರ್ಕಾರಿ ನೌಕರರ ವಿರುದ್ಧ ನ್ಯಾಯಾಲಯದಲ್ಲಿ ನಡೆಯುವ ಕ್ರಿಮಿನಲ್ ಮೊಕದ್ದಮೆ ಹಾಗೂ ಇಲಾಖಾ ವಿಚಾರಣೆಗಳು ಭಿನ್ನಭಿನ್ನವಾದ ನೆಲೆಯಲ್ಲಿ ನಡೆಸಲ್ಪಡುತ್ತವೆ. ಈ ಕುರಿತು ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ಸ್ಟೇಟ್ ಆಫ್ ರಾಜಸ್ತಾನ್ ವರ್ಸಸ್ ಬಿ.ಕೆ. ಮೀನ ಪ್ರಕರಣದಲ್ಲಿ ಈ ಕೆಳಕಂಡಂತೆ ನಿರ್ಣಯಿಸಿದೆ:–

*"This is yet another reason. The approach and the objective in the criminal proceedings and the disciplinary proceedings is altogether distinct and different. In the disciplinary proceedings, the question is whether the respondent is guilty of such conduct as would merit his removal from service or a lesser punishment, as the case may be, whereas in the criminal proceedings the question is whether offences registered against him under the Prevention of Corruption Act (and the Indian Penal Code, if any) are established and, if established, what sentence should be imposed upon him. The standard of proof, the mode of enquiry and the rules governing the enquiry and trial in both the cases are entirely distinct and different. Staying of disciplinary proceedings pending*

*criminal proceedings, to repeat, should not be matter of course but a considered decision. Even if stayed at one stage, the decision may require reconsideration if the criminal case gets unduly delayed.*

*We must make it clear that we have not case, and we should not be understood to have cast, any reflection on the merits of either party's case. What we have said is confined to the question at issue, viz, the desirability or advisability of staying the disciplinary proceedings against the respondent pending the criminal proceeding/case against him.*

*For the above reasons, it must be held that the Tribunal was in error in staying the disciplinary proceedings pending the criminal proceedings against the respondent. The appeal is accordingly allowed with costs. The order of the Tribunal is set aside. The disciplinary proceedings against the respondent shall go on expeditiously without waiting for the result of the criminal proceedings."*

ಈ ಕಾರಣದಿಂದಾಗಿ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇದ್ದಾಗಲೂ ಅದೇ ಆರೋಪಗಳ ಮೇಲೆ ಇಲಾಖಾ ಶಿಸ್ತಿನ ಕ್ರಮವನ್ನು ಜರುಗಿಸಬಹುದು. ಒಂದರಲ್ಲಿನ ತೀರ್ಮಾನವು ಇನ್ನೊಂದರ ಮೇಲೆ ಪ್ರಭಾವ ಬೀರುವುದಿಲ್ಲ. ಇದನ್ನು ಸ್ಪಷ್ಟವಾಗಿ ತಿಳಿಸಿ ಸುತ್ತೋಲೆ ಸಂ. ಸಿಆಸುಇ 5 ಸೇಇವಿ 96, ದಿನಾಂಕ.02.12.1997ನ್ನು ಹೊರಡಿಸಲಾಗಿದೆ.

- ವಿಚಾರಣಾಧಿಕಾರಿಗಳು ನಿಷ್ಪಕ್ಷಪಾತ ವಿಚಾರಣೆ ನಡೆಸಿ ಪ್ರಕರಣಕ್ಕೆ ಸಂಬಂಧಿಸಿದ ಸಾಕ್ಷಿಗಳನ್ನು ಪರಿಶೀಲನೆಗೆ ಒಳಪಡಿಸಿದ್ದು, ಇವರುಗಳು ಪ್ರಕರಣಕ್ಕೆ ಅವಶ್ಯಕ ಸಾಕ್ಷಿಗಳೇ ಹೊರತು' ಆಸಕ್ತ ಸಾಕ್ಷಿದಾರರಾಗಿರುವುದಿಲ್ಲ. ಇವರುಗಳು ಆಸಕ್ತಿ ಸಾಕ್ಷಿದಾರರೆಂದು ಗುರುತಿಸಲು ಯಾವುದೇ ದಾಖಲೆಯನ್ನು ಆರೋಪಿತರು ಸಲ್ಲಿಸಿರುವುದಿಲ್ಲ. ಆದುದರಿಂದ, ಈ ಅಹವಾಲನ್ನು ಒಪ್ಪತಕ್ಕದ್ದಲ್ಲ.
- ಈ ವಿಚಾರಣಾ ವರದಿಯನ್ನು ಅವಗಾಹಿಸಿದಲ್ಲಿ ಕೇವಲ ಮೌಖಿಕ ಸಾಕ್ಷಿಗಳನ್ನು ಆಧರಿಸದೇ ದಾಖಲೆಗಳ ಆಧಾರದ ಮೇಲೆ ವಿಚಾರಣೆಯನ್ನು ನಡೆಸಿರುತ್ತಾರೆ. ಆದುದರಿಂದ, ಆರೋಪಿತರ ಈ ವಾದ ಒಪ್ಪತಕ್ಕದ್ದಲ್ಲ.
- ವಿಚಾರಣಾಧಿಕಾರಿಯವರು ವಿಚಾರಣಾ ವರದಿಯಲ್ಲಿ ಈ ಅಂಶದ ಬಗ್ಗೆ ದೀರ್ಘವಾಗಿ ಪರಿಶೀಲಿಸಿದ್ದು, ಆಪಾದಿತರು ಸ್ಪಷ್ಟವಾಗಿ ಒಪ್ಪಿಕೊಂಡಿರುವಂತೆ ಮೂಲ ಫಲಾನುಭವಿಯಾದ ಶ್ರೀಮತಿ ಭಾರತಿರವರ ವಿಮಾ ಪರಿಹಾರ ಮೊತ್ತ ನೀಡುವ ಕೆಲಸವು ಟ್ರ್ಯಾಪ್ ದಿನಾಂಕದಂದು ಮುಕ್ತಾಯವಾಗಿದ್ದು, ಚೆಕ್‌ನ್ನು ವಿತರಣೆ ಮಾಡಲಾಗಿರುವುದಿಲ್ಲ. ತನಿಖೆಯ ವೇಳೆಯಲ್ಲಿ ಆರೋಪಿತರು ಲಂಚಕ್ಕಾಗಿ ಬೇಡಿಕೆ ಇಟ್ಟಿರುವುದು ಧ್ವನಿಮುದ್ರಿತ ಟೇಪ್‌ರೆಕಾರ್ಡ್‌ನ ಮೂಲಕ ದೃಢಪಟ್ಟಿರುತ್ತದೆ. ಆದುದರಿಂದ, ಆರೋಪಿತರು ಫಿರ್ಯಾದುದಾರರ ಕೆಲಸವು ಅವರ ಬಳಿ ಬಾಕಿ ಇಲ್ಲದಿರುವುದರಿಂದ ಅವರು ಲಂಚಕ್ಕಾಗಿ ಬೇಡಿಕೆ ಇಟ್ಟಿದ್ದಾರೆ ಎಂದು ಹೇಳಿರುವುದು ಅಂಗೀಕಾರಾರ್ಹವಲ್ಲ ಎಂಬುದರ ಬಗ್ಗೆ ವಿಚಾರಣಾಧಿಕಾರಿಯವರು ಈ ಅಂಶವನ್ನು ರುಜುವಾತುಪಡಿಸಲು ಆರೋಪಿತರು ವಿಫಲರಾಗಿದ್ದಾರೆ ಹಾಗೂ ಆರೋಪಿತರೇ ಒಪ್ಪಿಕೊಂಡಂತೆ ಲಂಚದ ಮೊತ್ತವು ಟ್ರ್ಯಾಪ್ ವೇಳೆಯಲ್ಲಿ ಆರೋಪಿತರ ಬಳಿ ಇದ್ದುದು ಶಿಸ್ತು ಪ್ರಾಧಿಕಾರಿಯ ವಾದಕ್ಕೆ ಪೂರಕವಾಗಿದೆಯೆಂದು ನಿರ್ಣಯಿಸಿರುತ್ತಾರೆ.
- ಪಿ.ಡಬ್ಲ್ಯು–1. ನುಡಿದಿರುವ ಸಾಕ್ಷಿಯನುಸಾರ ಆರೋಪಿತರು ಲಂಚಕ್ಕಾಗಿ ಬೇಡಿಕೆ ಇಟ್ಟಿರುತ್ತಾರೆ ಹಾಗೂ ಟ್ರ್ಯಾಪ್‌ನಲ್ಲಿ ಧ್ವನಿಮುದ್ರಿತ ಟೇಪ್‌ರೆಕಾರ್ಡ್‌ನ ಮೂಲಕ ಫಿರ್ಯಾದುದಾರರು ಮತ್ತು ಆಪಾದಿತರ ನಡುವಿನ ಸಂಭಾಷಣೆ ದಾಖಲಾಗಿದ್ದು, ತದನಂತರವಷ್ಟೇ ಪಿ.ಡಬ್ಲ್ಯು–1 ದೂರಿನನುಸಾರ ಆರೋಪಿತರ ವಿರುದ್ಧ ದೂರು ದಾಖಲಿಸಲಾಗಿದೆ. ಮುಂದುವರೆದು, ಖಂಡಿಕೆ:10ರಲ್ಲಿ ಡಿ.ಐ.ಓ. ರವರು ಚೆಕ್ ಹೊರಡಿಸಲು ಅನುಮತಿಸಿದ್ದರೂ ಸಹ ಆರೋಪಿತರು ಚೆಕ್ ಬ್ರಾಂಚ್‌ಗೆ ಕಡತವನ್ನು ಕಳುಹಿಸದೇ ಟ್ರ್ಯಾಪ್ ನಡೆದ ವೇಳೆ ಅವರ ಬಳಿ ಕಡತವನ್ನು ಇರಿಸಿಕೊಂಡಿರುತ್ತಾರೆ. ಹೀಗಾಗಿ ಲಂಚದ ಬೇಡಿಕೆ ಮತ್ತು ಸ್ವೀಕೃತಿ ಎರಡು ರುಜುವಾತಾಗಿರುತ್ತದೆ."
- ಈಗಾಗಲೇ ವಿಚಾರಣಾಧಿಕಾರಿಯವರು ವಿಚಾರಣಾ ವರದಿಯ ಖಂಡಿಕೆ:16ರಲ್ಲಿ ಈ ಅಂಶದ ಬಗ್ಗೆ ದೀರ್ಘವಾಗಿ ಪರಿಶೀಲಿಸಿದ್ದು, ಆಪಾದಿತರು ಸ್ಪಷ್ಟವಾಗಿ ಒಪ್ಪಿಕೊಂಡಿರುವಂತೆ ಮೂಲ ಫಲಾನುಭವಿಯಾದ ಶ್ರೀಮತಿ ಭಾರತಿರವರ ವಿಮಾ ಪರಿಹಾರ ಮೊತ್ತ ನೀಡುವ ಕೆಲಸವು ಟ್ರ್ಯಾಪ್ ದಿನಾಂಕದಂದು ಮುಕ್ತಾಯವಾಗಿದ್ದರೂ, ಚೆಕ್‌ನ್ನು ವಿತರಣೆ ಮಾಡಲಾಗಿರುವುದಿಲ್ಲ. ಆಪಾದಿತರೇ ಒಪ್ಪಿಕೊಂಡಂತೆ ಲಂಚದ ಮೊತ್ತವಾದ ₹. 1,900/–ನ್ನು ಅವರಿಂದ ವಶಪಡಿಸಿಕೊಳ್ಳಲಾಗಿದೆ ಹಾಗೂ ಈ ನಿಟ್ಟಿನಲ್ಲಿ ಆಪಾದಿತರು ಟ್ರ್ಯಾಪ್ ವೇಳೆಯಲ್ಲಿ ಫಿರ್ಯಾದುದಾರರು ತನ್ನಿಂದ ಪಡೆದುಕೊಂಡ ಸಾಲದ ಮರುಪಾವತಿಯಾಗಿ ₹. 1,900/– ಎಂದು ಕಟ್ಟಿರುವ ಕಥೆಯನ್ನು ಒಪ್ಪಲಾಗದು. ಏಕೆಂದರೆ, ಫಿರ್ಯಾದುದಾರರಗಲೀ ಅಥವಾ ಅವರ ಪತ್ನಿಯಾಗಲೀ ಆಪಾದಿತರಿಗೆ ಪರಿಚಿತರಲ್ಲ. ಆದುದರಿಂದ ಆರೋಪಿತರ ಈ ವಾದ ಸುಳ್ಳಾಗಿರುತ್ತದೆ.
- ಪಿಡಬ್ಲ್ಯು–1 ಅವರ ಸಾಕ್ಷಿಯಂತೆ ಆಪಾದಿತರು ಫಿರ್ಯಾದುದಾರರ ಪತ್ನಿಯಿಂದ ಲಂಚದ ಮೊತ್ತಕ್ಕಾಗಿ ಬೇಡಿಕೆ ಇಟ್ಟಿರುವುದು ಹಾಗೂ ಫಿರ್ಯಾದುದಾರರು ಮತ್ತು ಅವರ ಪತ್ನಿ ವಿಮಾ ಪರಿಹಾರ ಮೊತ್ತವನ್ನು ಪರಿಪಕ್ವವಾದ ಕೆ.ಜಿ.ಐ.ಡಿ. ಪಾಲಿಸಿಯ ಮೇಲೆ ನೀಡಲು ಕೋರಿರುವುದನ್ನು ನಂಬಬಹುದೆಂದು ವಿಚಾರಣೆಯಲ್ಲಿ ದೃಢಪಟ್ಟಿದೆ. ಮುಂದುವರೆದು, ಪಿಡಬ್ಲ್ಯು–2 ಅವರು ನೀಡಿರುವ ಸಾಕ್ಷ್ಯಾನುಸಾರ ಅವರ ಕೆಲಸವನ್ನು ಮಾಡಲು ಆಪಾದಿತರು ಲಂಚದ ಮೊತ್ತಕ್ಕೆ ಬೇಡಿಕೆ ಇಟ್ಟು ಟ್ರ್ಯಾಪ್ ವೇಳೆಯಲ್ಲಿ ಪಡೆದಿರುತ್ತಾರೆ. ಆದುದರಿಂದ, ಆಪಾದಿತರು ಸಲ್ಲಿಸಿರುವಂತೆ ಇದು ಮೋಸದ ಜಾಲ ಎಂದು ಹೇಳಿರುವುದು ಸುಳ್ಳು.
- ಈಗಾಗಲೇ ವಿಚಾರಣಾಧಿಕಾರಿಯವರು ವಿಚಾರಣಾ ವರದಿಯ ಖಂಡಿಕೆ:16ರಲ್ಲಿ ಈ ಅಂಶದ ಬಗ್ಗೆ ದೀರ್ಘವಾಗಿ ಪರಿಶೀಲಿಸಿದ್ದು, ಆಪಾದಿತರು ಸ್ಪಷ್ಟವಾಗಿ ಒಪ್ಪಿಕೊಂಡಿರುವಂತೆ ಮೂಲ ಫಲಾನುಭವಿಯಾದ ಶ್ರೀಮತಿ ಭಾರತಿರವರ ವಿಮಾ ಪರಿಹಾರ ಮೊತ್ತ ನೀಡುವ ಕೆಲಸವು ಟ್ರ್ಯಾಪ್ ದಿನಾಂಕದಂದು ಮುಕ್ತಾಯವಾಗಿದ್ದರೂ, ಚೆಕನ್ನು ವಿತರಣೆ ಮಾಡಲಾಗಿರುವುದಿಲ್ಲ ಎಂದು ದಾಖಲೆಗಳಿಂದ ವಿಚಾರಣೆಯಲ್ಲಿ ದೃಢಪಟ್ಟಿರುತ್ತದೆ. ಆದುದರಿಂದ, ಈ ಪ್ರಕರಣವನ್ನು ಕೈಬಿಡುವ ಪ್ರಶ್ನೆ ಉದ್ಭವಿಸುವುದಿಲ್ಲ.

- ಈಗಾಗಲೇ ಸಾಕ್ಷ್ಯಾಧಾರಗಳ ಮೇಲೆ ವಿಚಾರಣೆಗೆ ದೃಢಪಟ್ಟಿರುವಂತೆ ಹಾಗೂ ಪಿಡಬ್ಲ್ಯು–2 ಅವರು ನೀಡಿರುವ ಸಾಕ್ಷ್ಯಾನುಸಾರ ಅವರ ಕೆಲಸವನ್ನು ಮಾಡಲು ಆಪಾದಿತರು ಲಂಚದ ಮೊತ್ತಕ್ಕೆ ಬೇಡಿಕೆ ಇಟ್ಟು ಟ್ರ್ಯಾಪ್ ವೇಳೆಯಲ್ಲಿ ಪಡೆದಿರುತ್ತಾರೆ. ಆದುದರಿಂದ, ಆಪಾದಿತರು ಸಲ್ಲಿಸಿರುವಂತೆ ಇದು ಮೋಸದ ಜಾಲ ಎಂದು ಹೇಳಿರುವುದು ಸುಳ್ಳು.
- ವಿಚಾರಣಾ ವರದಿಯ ಖಂಡಿಕೆ:9ರಲ್ಲಿ ಈ ವಿಷಯವನ್ನು ದೀರ್ಘವಾಗಿ ಪರಿಶೀಲಿಸಲಾಗಿದ್ದು, ಘಟನೆ ನಡೆದ ವಿವರವನ್ನು ತಿಳಿಸಲಾಗಿದ್ದು, ಅದರನುಸಾರ ಆಪಾದಿತರು ಫಿರ್ಯಾದುದಾರರಿಗೆ ಹಣವನ್ನು ಕೊಡಲು ಕೇಳಿದ್ದು, ಅದರಂತೆ ಫಿರ್ಯಾದುದಾರರು ಹಣವನ್ನು ಆಪಾದಿತರಿಗೆ ನೀಡಿರುತ್ತಾರೆ.
- ಮಾನ್ಯ Principal District and Sessions Judge and Special Judge Court, ಚಿತ್ರದುರ್ಗ ದಲ್ಲಿರುವ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣ ಸಂ.4/2016 ಬಾಕಿ ಇದೆಯೆಂದು ತಿಳಿಸಿರುತ್ತಾರೆ. ವಿಶೇಷ ನ್ಯಾಯಾಲಯದಲ್ಲಿ ಬಾಕಿ ಇರುವ ಕ್ರಿಮಿನಲ್ ಪ್ರಕರಣದ ಪ್ರಕ್ರಿಯೆ ಮತ್ತು ಇಲಾಖಾ ವಿಚಾರಣೆ ಪ್ರಕ್ರಿಯೆಯು ಬೇರೆ ಬೇರೆ ಸ್ವರೂಪದ್ದಾಗಿದ್ದು, ಒಂದಕ್ಕೊಂದು ಪ್ರತ್ಯೇಕವಾಗಿರುತ್ತದೆ.
- ವಿಚಾರಣಾಧಿಕಾರಿಗಳು ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ಸಾಕ್ಷಿಗಳನ್ನು ಪರಿಶೀಲನೆಗೆ ಒಳಪಡಿಸಿ ನಿಷ್ಪಕ್ಷಪಾತವಾಗಿ ವಿಚಾರಣೆಯನ್ನು ನಡೆಸಿರುತ್ತಾರೆ
- ಲಂಚಕ್ಕೆ ಬೇಡಿಕೆ ಇಟ್ಟು ಸ್ವೀಕರಿಸಿರುವ ಆಪಾದನೆ ದೃಢಪಟ್ಟು ಅವರು ದುರ್ನಡತೆ ಎಸಗಿರುವುದು ಈ ವಿಚಾರಣೆಯಲ್ಲಿ ಪರಿಶೀಲನೆಗೆ ಸೀಮಿತವಾದ ಅಂಶ. ಇತರೆ ವೈಯಕ್ತಿಕ ಅಂಶಗಳು ವಿಚಾರಣಾ ವ್ಯಾಪ್ತಿಗಾಗಲೀ ಅಥವಾ ದುರ್ನಡತೆಗೆ ದಂಡನೆ ವಿಧಿಸುವ ಪ್ರಮೇಯದಲ್ಲಿ ಪರಿಗಣನೆಗೆ ಬರುವುದಿಲ್ಲ.
- ವಿಚಾರಣಾ ವರದಿಯ ಆಧಾರದ ಮೇಲೆ ಆಪಾದಿತರು ದುರ್ನಡತೆ ಎಸಗಿರುವುದು ರುಜುವಾತಾಗಿದ್ದು, ಕಡ್ಡಾಯ ನಿವೃತ್ತಿಗೊಳಿಸಲು ಶಿಫಾರಸ್ಸು ಮಾಡಿರುವ ದಂಡನೆಯು ಸೂಕ್ತವಾಗಿರುತ್ತದೆ.

ಈ ಎಲ್ಲಾ ಅಂಶಗಳನ್ನು ವಿಶ್ಲೇಷಿಸಿ, ಶ್ರೀಮತಿ ಮಂಜುಳಾಬಾಯಿ, ಪ್ರ.ದ.ಸ., ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಅವರ ಉತ್ತರವನ್ನು ಒಪ್ಪಿಕೊಳ್ಳದೇ ಇವರು ಪಾಲಿಸಿ ಮೊತ್ತವನ್ನು ಇತ್ಯರ್ಥಪಡಿಸಲು ₹. 1900/–ಗಳ ಅಕ್ರಮ ಸಂಭಾವನೆ ಪಡೆದ ಆರೋಪವು ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯ ಹಾಗೂ ಮಾನ್ಯ ಉಪ ಲೋಕಾಯುಕ್ತರುರವರ ಶಿಫಾರಸ್ಸು ಒಪ್ಪಿಕೊಂಡು, ದಂಡನೆ ವಿಧಿಸಲು ನಿರ್ಣಯಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 77 ಕವಿಇ 2014, ಬೆಂಗಳೂರು, ದಿನಾಂಕ : 20.10.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀಮತಿ ಮಂಜುಳಾಬಾಯಿ, ಪ್ರ.ದ.ಸ., ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿಗೊಳಿಸಿದೆ.

**P.R. 673**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಶಶಿಧರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡಗಳು)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ನಿವೃತ್ತ ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೀದರ್, ಇವರ ವಿರುದ್ಧ ಇಲಾಖಾ ವಿಚಾರಣೆ– ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂಖ್ಯೆ: ಆಇ 41 ಕವಿಇ 2010, ದಿನಾಂಕ:06.03.2013.
2) ಉಪಲೋಕಾಯುಕ್ತರ ಆದೇಶ ಸಂಖ್ಯೆ : LOK/INQ/14-A/149/2013, ದಿನಾಂಕ: 20.03.2013.
3) ಅಪರ ನಿಬಂಧಕರು (ವಿಚಾರಣೆಗಳು–1), ಕರ್ನಾಟಕ ಲೋಕಾಯುಕ್ತ ಇವರ ವಿಚಾರಣಾ ವರದಿ ದಿನಾಂಕ : 20.01.2015
4) ಮಾನ್ಯ ಉಪಲೋಕಾಯುಕ್ತ–1 ರವರು ಮಾಡಿರುವ ಪರಿಷ್ಕೃತ ಶಿಫಾರಸ್ಸು ಪತ್ರ ಸಂಖ್ಯೆ: LOK/ARE-1/ENQ-149/2013, ದಿನಾಂಕ: 14.01.2016.
5) ಆಪಾದಿತ ನೌಕರರಿಗೆ ಎರಡನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ: 28.01.2016.
6) ಎರಡನೇ ಕಾರಣ ಕೇಳುವ ನೋಟೀಸಿಗೆ ಆಪಾದಿತ ನೌಕರರು ಲಿಖಿತ ಉತ್ತರ ಸಲ್ಲಿಸಿದ ದಿನಾಂಕ: 26/29.02.2016.
7) ಕಾರ್ಯದರ್ಶಿ, ಕರ್ನಾಟಕ ಲೋಕಾ ಸೇವಾ ಆಯೋಗ, ಇವರ ಪತ್ರ ಸಂ. ಪಿಎಸ್‌ಸಿ 86 ಸಿಎನ್‌ಎಸ್ 2016, ದಿನಾಂಕ: 26.09.2016.

**ಪ್ರಸ್ತಾವನೆ :**

ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ನಿವೃತ್ತ ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೀದರ್‌ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 03.08.2010ರಂದು ಫಿರ್ಯಾದಿ ಶ್ರೀ ಎಂ. ಮೋಯಿನ್ ಪಾಶಾ ಬಿನ್ ಜಾನಿ ಮಿಯ್ಯಾ, ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಬೀದರ್, ಇವರ ಕೆ.ಜಿ.ಐ.ಡಿ. ವಿಮಾ ಪಾಲಿಸಿಯ ಮೇಲೆ ಸಾಲ ಮಂಜೂರು ಮಾಡಲು ₹. 500/–ಲಂಚಕ್ಕಾಗಿ ಬೇಡಿಕೆ ಇಟ್ಟ ಆರೋಪಕ್ಕಾಗಿ ಇತರರೊಡನೆ ಅವರ ವಿರುದ್ಧವೂ ಸಹ ಮೇಲೆ (1) ರಲ್ಲಿ ಓದಲಾದ ದಿನಾಂಕ: 06.03.2013ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರನ್ವಯ ಉಪ ಲೋಕಾಯುಕ್ತರಿಗೆ ವಹಿಸಲಾಯಿತು. ಉಪಲೋಕಾಯುಕ್ತರ ಮೇಲೆ (2)ರಲ್ಲಿ ಓದಲಾದ ದಿನಾಂಕ: 20.03.2013ರ ಆದೇಶದಲ್ಲಿ ವಿಚಾರಣಾಧಿಕಾರಿಯಾಗಿ ನೇಮಸಲ್ಪಟ್ಟ ಅಪರ ನಿಬಂಧಕರು, ವಿಚಾರಣೆಗಳು–1 ಅವರ ಮೇಲೆ (3)ರಲ್ಲಿ ಓದಲಾದ ದಿನಾಂಕ: 20.01.2015ರ ವಿಚಾರಣಾ ವರದಿ ಸಲ್ಲಿಸಿ, ಆರೋಪ ಕುರಿತು ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ.

ಶಿಸ್ತು ಪ್ರಾಧಿಕಾರದ ಪರ 1ನೇ ಸಾಕ್ಷಿ ಫಿರ್ಯಾದುದಾರರಾಗಿದ್ದು, ಮೊದಲನೇ ಆರೋಪಿಯು ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್‌ರಾಗಿರುತ್ತಾರೆ ಮತ್ತು 2ನೇ ಆರೋಪಿಯು ಶ್ರೀ ರವಿಚಂದು ರಾಥೋಡ್ ಆಗಿರುತ್ತಾರೆ. ಈ ಪ್ರಕರಣದಲ್ಲಿ 1ನೇ ಸಾಕ್ಷಿದಾರರು, ಅರ್ಜಿ ಸಲ್ಲಿಸಿದ ₹. 50,000/–ಗಳ ಸಾಲ ಕುರಿತು ಕೆ.ಜಿ.ಐ.ಡಿ. ಕಛೇರಿಗೆ ಹೋಗಿ ಶ್ರೀ ಪಾಟೀಲ್ ಎಂಬುವವರನ್ನು ಭೇಟಿಯಾದಾಗ ಅವರು ₹. 500/– ಗಳ ಲಂಚ ಕೇಳಿದ್ದು, ರೂ.350/– ಲಂಚವನ್ನು ಅವರಿಗೆ ನೀಡಿರುತ್ತಾರೆ. ಆ ಸಮಯದಲ್ಲಿ 2ನೇ ಆರೋಪಿ ಶ್ರೀ ರವಿಚಂದು ರಾಥೋಡ್ ರವರು ಅಲ್ಲಿ ಹಾಜರಿದ್ದರು. ಅದಾದ 2–3 ದಿನಗಳ ನಂತರ ಮತ್ತೆ ಹೋಗಿ ಅದೇ ಪಾಟೀಲ್‌ರನ್ನು ಭೇಟಿ ಮಾಡಿದಾಗ ಅವರ ಕೆಲಸವನ್ನು 2ನೇ ಆರೋಪಿಯಾದ ಶ್ರೀ ರವಿಚಂದು ರಾಥೋಡ್ ಅವರು ಮಾಡಬೇಕು ಎಂದ ಮೇರೆಗೆ 2ನೇ ಆರೋಪಿಯನ್ನು ಕೇಳಲಾಗಿ ಅವರು ರೂ.500/– ಲಂಚ ಕೇಳಿದರು. ನಂತರ 1ನೇ ಸಾಕ್ಷಿದಾರರು ಸ್ನೇಹಿತರ ಜೊತೆ ಜಿಲ್ಲಾ ಲೋಕಾಯುಕ್ತ ಠಾಣೆಗೆ ಹೋಗಿ ದೂರನ್ನು ದಾಖಲಿಸಿರುತ್ತಾರೆ.

ಲೋಕಾಯುಕ್ತ ಪೋಲೀಸರು 1ನೇ ಸಾಕ್ಷಿದಾರರು ನೀಡಿದ 500/–ರೂ.ಗಳ ನೋಟುಗಳಿಗೆ ಫಿನೊಲೋಪ್ತಲಿನ್ (phenolphthalein) ಪೌಡರ್ ಸಿಂಪಡಿಸಿ, ಆರೋಪಿತರು ಕೇಳಿದಾಗ ಮಾತ್ರ ಕೊಡುವಂತೆ ಹಾಗೂ ಆ ನಂತರ ಹೊರಗೆ ಬಂದು ಸಂಜ್ಞೆ ಮಾಡುವಂತೆ ಸೂಚನೆ ನೀಡಿದರು. ಅದರಂತೆ 1ನೇ ಸಾಕ್ಷಿದಾರರು 2ನೇ ಆರೋಪಿಯ ಕಛೇರಿಗೆ ಹೋಗಿ ಆತನನ್ನು ಭೇಟಿ ಮಾಡಿ ಲಂಚದ ₹. 500/–ಗಳನ್ನು ಅವರಿಗೆ ನೀಡಿದರು. ಅದನ್ನು ಬಲಗೈಯಿಂದ ಪಡೆದು ಅವರು ಷರ್ಟಿನ ಎಡ ಜೇಬಿನಲ್ಲಿ ಇರಿಸಿರುವುದನ್ನು ನೆರಳು ಸಾಕ್ಷಿಯಾದ 2ನೇ ಸಾಕ್ಷಿದಾರರು ಗಮನಿಸಿದರು. ನಂತರ ತಾನು ಹೊರ ಬಂದು ಪೋಲೀಸರಿಗೆ ಸಂಜ್ಞೆ ನೀಡಲಾಗಿ ಅವರು ಒಳ ಬಂದಾಗ 2ನೇ ಆರೋಪಿಯನ್ನು ತೋರಿಸಿದರು. ಪೋಲೀಸರು 2ನೇ ಆರೋಪಿಯ ಎರಡು ಕೈಗಳನ್ನು ತೊಳೆಯಲಾಗಿ ದ್ರಾವಣವು ಕೆಂಪು ಬಣ್ಣಕ್ಕೆ ತಿರುಗಿತು. ಲಂಚದ ಹಣವನ್ನು 2ನೇ ಆರೋಪಿಯ ಷರ್ಟಿನ ಜೇಬಿನಲ್ಲಿ ತೆಗೆಯಲಾಯಿತು. ಸಂಖ್ಯೆಗಳನ್ನು ಹೋಲಿಸಲಾಗಿ ಅವು ಹೊಂದಾಣಿಕೆ ಆದವು. ನಂತರ ಪೋಲೀಸರು 1ನೇ ಆರೋಪಿಯಾದ ಶ್ರೀ ಇಕ್ಬಾಲ್ ಮಿಯಾನ್‌ರವರ ಕೊಠಡಿಗೆ ತೆರಳಿ ಅವರನ್ನು ವಿಚಾರಣೆ ಮಾಡಿ, ಫೋಟೋಗಳನ್ನು ತೆಗೆದು ಮಹಜರನ್ನು ಮಾಡಿರುತ್ತಾರೆ.

ಆರೋಪಿತರಾದ ಶ್ರೀ ರವಿಚಂದು ರಾಥೋಡ್ ಅವರು ವಿಚಾರಣೆಯಲ್ಲಿ ಹಾಜರಿದ್ದರೂ ತಾನಾಗಲೀ ತನ್ನ ವಕೀಲರ ಮೂಲಕವಾಗಲಿ 1ನೇ ಸಾಕ್ಷಿದಾರರನ್ನು ಪಾಟೀ ಸವಾಲಿಗೆ ಒಳಪಡಿಸಲಿಲ್ಲ. ಆ ನಂತರವು ವಿಚಾರಣಾ ಅವಧಿಯಲ್ಲಿ ಪೂರ್ತಿ ಅವರು ಗೈರು ಹಾಜರಾಗಿಯೇ ಉಳಿದರು. 3ನೇ ಸಾಕ್ಷಿದಾರರೂ ಸಹ 2ನೇ ಸಾಕ್ಷಿಯು ₹. 500/–ಗಳನ್ನು ಪಡೆದಿರುವುದನ್ನು ಖಚಿತಪಡಿಸಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ತನಿಖಾಧಿಕಾರಿಯಾಗಿ ಕಾರ್ಯನಿರ್ವಹಿಸಿದ 5ನೇ ಸಾಕ್ಷಿದಾರರು ಲೋಕಾಯುಕ್ತ ಇನ್ಸ್‌ಪೆಕ್ಟರ್ ಅವರು ನೀಡಿದ ಹೇಳಿಕೆಯಂತೆ ಫಿರ್ಯಾದುದಾರರು ದಿನಾಂಕ: 02.08.2010 ರಲ್ಲಿ ತನ್ನ ಕಛೇರಿಗೆ ಬಂದು 1ನೇ ಆರೋಪಿಯಾದ ಶ್ರೀ ಇಕ್ಬಾಲ್ ಮಿಯಾನ್ ಹಾಗೂ 2ನೇ ಆರೋಪಿಯಾದ ಶ್ರೀ ರವಿಚಂದು ರಾಥೋಡ್ ರವರುಗಳು ತನಗೆ ₹. 50,000/– ಸಾಲ ಮಂಜೂರು ಮಾಡಲು ₹. 500/–ಗಳನ್ನು ಲಂಚ ಕೇಳುತ್ತಿದ್ದಾರೆಂದು ದೂರು ನೀಡಿದ ಮೇಲೆ ಅದನ್ನು ಖಚಿತಪಡಿಸುವ ಸಲುವಾಗಿ ಆತನಿಗೆ ಮೈಕ್ರೊ ರಿಕಾರ್ಡರ್ ನೀಡಿ ಕಛೇರಿಗೆ ಹೋಗಿ ಸಂಭಾಷಣೆಯನ್ನು ಧ್ವನಿಮುದ್ರಣ ಮಾಡಿ ತರುವಂತೆ ತಿಳಿಸಿದರು. 3ನೇ ತಾರೀಖಿನಂದು ಬಂದು ಫಿರ್ಯಾಧಿಯು ಧ್ವನಿ ಮುದ್ರಿತ ಕ್ಯಾಸೆಟ್‌ನ್ನು ಹಾಜರುಪಡಿಸಿ ದೂರನ್ನು ದಾಖಲಿಸಿದರು. ಎಲ್ಲಾ ಔಪಚಾರಿಕ ಕ್ರಿಯೆಗಳನ್ನು ನಡೆಸಿ ಫಿರ್ಯಾದಿಯ ಷರ್ಟಿನ ಎಡ ಜೇಬಿನಲ್ಲಿ ಹಣವನ್ನು ಇಟ್ಟು ಆ ನಂತರ ಟ್ರ್ಯಾಪ್ ನಡೆದ ಕುರಿತು ವಿವರಿಸಿದ್ದಾರೆ. ಅನಂತರ ತನಿಖಾಧಿಕಾರಿಯಾಗಿ ಕಾರ್ಯನಿರ್ವಹಿಸಿದ 4ನೇ ಸಾಕ್ಷಿದಾರ ತಾನೂ ಕೂಡಾ ಕ್ಯಾಸೆಟ್‌ನ್ನು ವಶಪಡಿಸಿಕೊಂಡು ಸಾಕ್ಷಿಗಳ ಹೇಳಿಕೆಯನ್ನು ದಾಖಲಿಸಿ ತರುವಾಯ ನ್ಯಾಯಾಲಯಕ್ಕೆ ಚಾರ್ಜ್‌ಷೀಟ್ ಸಲ್ಲಿಸಿರುವುದಾಗಿ ತಿಳಿಸಿದ್ದಾರೆ.

ಹೀಗೆ ಎಲ್ಲಾ ಸಾಕ್ಷಿಗಳೂ ಸಹ 2ನೇ ಆರೋಪಿಯು ಅಕ್ರಮ ಸಂಭಾವನೆ ಪಡೆದಿರುವುದನ್ನು ದೃಢಪಡಿಸಿದ್ದಾರೆ. ಅದರಲ್ಲೂ 1ನೇ ಮತ್ತು 3ನೇ ಸಾಕ್ಷಿಗಳು ಆರೋಪಿಯು ಲಂಚ ಸ್ವೀಕರಿಸಿರುವುದನ್ನು ಸ್ಪಷ್ಟವಾಗಿಯೇ ತಿಳಿಸಿದ್ದಾರೆ.

ಮೇಲೆ ವಿವರಿಸಿರುವಂತೆ ವಿಚಾರಣಾಧಿಕಾರಿಗಳು ಮೊದಲನೆ ಆರೋಪಿಯ ಬಗ್ಗೆ ತಮ್ಮ ನಿರ್ಣಯದಲ್ಲಿ ದಾಖಲೆ ಪಿ–1 ಅನುಸಾರ ದೂರನ್ನು ನೀಡಿರುವುದನ್ನು ಶಿಸ್ತು ಪ್ರಾಧಿಕಾರದ ಪರವಾಗಿರುವ ಮೊದಲನೆ ಸಾಕ್ಷಿದಾರರು ಒಪ್ಪಿಕೊಂಡಿರುತ್ತಾರೆ. ಸದರಿ ದೂರಿನ ಅನುಸಾರ ಮೊದಲನೆ ಸಾಕ್ಷಿದಾರರು 1ನೇ ಆರೋಪಿಯನ್ನು ಭೇಟಿ ಮಾಡಿ ತನ್ನ ಕೆಲಸವು ₹. 350/–ನ್ನು ಪಾಟೀಲ ಎಂಬುವವರಿಗೆ ಕೊಟ್ಟಿದಾಗಿಯು ಸಹ ಆಗಿಲ್ಲ ಎಂಬುದಾಗಿ ತಿಳಿಸಿದ ವೇಳೆಯಲ್ಲಿ ಒಂದನೇ ಆರೋಪಿಯು ಅವರಿಗೆ ಸದರಿ ಮೊತ್ತವನ್ನು ಪಾಟೀಲ ಅವರಿಂದ ವಾಪಾಸ್ಸು ಪಡೆಯಲು ತಿಳಿಸಿರುತ್ತಾರೆ. ಇಲ್ಲದಿದ್ದಲ್ಲಿ ಹೆಚ್ಚುವರಿ ಮೊತ್ತವನ್ನು ತನಗೂ ಹಾಗೂ 2ನೇ ಆರೋಪಿಯಾದ ಶ್ರೀ ರಾಥೋಡ ಅವರಿಗೂ ₹. 500/–ನ್ನು ದಿ:03.08.2010ರಂದು ನೀಡಲು ತಿಳಿಸುತ್ತಾ ಒಂದು ವೇಳೆ ಹಣವನ್ನು ಕೊಟ್ಟಲ್ಲಿ ಅವರ ಕೆಲಸವಾಗುದೆಂದು ತಿಳಿಸಿದ್ದಾರೆ. 2ನೇ ಸಾಕ್ಷಿ ಮತ್ತು 3ನೇ ಸಾಕ್ಷಿ ಫಿರ್ಯಾದುದಾರರಾದ 1ನೇ ಸಾಕ್ಷಿ ಪೋಲೀಸರಲ್ಲಿ ದೂರು ದಾಖಲಾದಾಗ ಉಪಸ್ಥಿತರಿದ್ದರು. ಹಾಗೂ ಅವರು ನೀಡಿದ ಸಾಕ್ಷಿಯು 1ನೇ ಆರೋಪಿ ಮತ್ತು 2ನೇ ಆರೋಪಿಯು ಲಂಚದ ಹಣಕ್ಕಾಗಿ ಬೇಡಿಕೆ ಇಟ್ಟಿರುವುದು ದೂರು ದಾಖಲೆ ಪಿ–1 ನಿಂದ ತಿಳಿಯುತ್ತದೆ.

ತನಿಖಾಧಿಕಾರಿಯವರು ಫಿರ್ಯಾದುದಾರರಿಂದ ದೂರನ್ನು ತೆಗೆದುಕೊಳ್ಳುವ ಮುನ್ನ ಅವರಿಗೆ ಟೇಪ್ ರೆಕಾರ್ಡ್‌ನ್ನು ಕೊಟ್ಟು ಆರೋಪಿತರೊಂದಿಗಿನ ಸಂಭಾಷಣೆಯನ್ನು ದಾಖಲಿಸಲು ಹೇಳಿದ್ದು, ಸಂಭಾಷಣೆಯನ್ನು ರೆಕಾರ್ಡ್ ಮಾಡಿದ ನಂತರ ಮರುದಿನ 1ನೇ ಸಾಕ್ಷಿದಾರರು ದಿ:03.08.2010ರಂದು ದೂರನ್ನು ದಾಖಲಿಸಿರುತ್ತಾರೆ. ಇದರಿಂದಾಗಿ 5ನೇ ಸಾಕ್ಷಿಯು 1ನೇ ಆರೋಪಿ ಮತ್ತು 2ನೇ ಆರೋಪಿಯು ಫಿರ್ಯಾದುದಾರರ ಕೆಲಸವನ್ನು ಮಾಡಿಕೊಡಲು ಲಂಚದ ಬೇಡಿಕೆ ಇಟ್ಟಿರುವುದು ಖಚಿತಪಡಿಸಿರುತ್ತಾರೆ. ಈ ಸಂದರ್ಭಗಳ ಹಿನ್ನೆಲೆಯಲ್ಲಿ 1ನೇ ಆರೋಪಿಯಿಂದ ಲಂಚದ ಬೇಡಿಕೆ ಇಲ್ಲ ಎಂಬುದನ್ನು ನಿರ್ಣಯಿಸಲು ಕಠಿಣವಾಗುತ್ತದೆ. ಆದಾಗ್ಯೂ ಸಹ ಸಾಕ್ಷಿಗಳ ಆಧಾರದ ಮೇಲೆ ಅದರಲ್ಲೂ 1ನೇ ಸಾಕ್ಷಿ ಮತ್ತು 3ನೇ ಸಾಕ್ಷಿದಾರರ ಸಾಕ್ಷ್ಯದ ಅನುಸಾರ ಶ್ರೀ ಇಕ್ಬಾಲ್ ಮಿಯಾನ್‌ರವರು 1ನೇ ಸಾಕ್ಷಿದಾರರಿಗೆ ಲಂಚದ ಮೊತ್ತವನ್ನು 2ನೇ ಆರೋಪಿಗೆ ನೀಡಲು ಹೇಳಿರುವುದು ದೃಢಪಟ್ಟಿರುವುದಿಲ್ಲ. ಅವರುಗಳ ಸಾಕ್ಷಿಯಂತೆ ಟ್ರಾಪ್ ವೇಳೆಯಲ್ಲಿ 2ನೇ ಆರೋಪಿಯು ₹. 500/– ಲಂಚದ ಮೊತ್ತಕ್ಕೆ ಬೇಡಿಕೆ ಇಟ್ಟು ಸ್ವೀಕರಿಸಿದ್ದಾರೆ.

ಮೇಲ್ಕಂಡ ಚರ್ಚೆಯಂತೆ, 1ನೇ ಆರೋಪಿಯಾದ ಶ್ರೀ ಇಕ್ಬಾಲ್ ಮಿಯಾನ್ ಮತ್ತು 2ನೇ ಆರೋಪಿಯು ರೂ.500/– ಗಳ ಲಂಚದ ಮೊತ್ತಕ್ಕೆ ಬೇಡಿಕೆ ಇಟ್ಟಿದ್ದು, 2ನೇ ಆರೋಪಿಯೊಬ್ಬರೇ ಲಂಚ ಸ್ವೀಕರಿಸಿರುವುದಾಗಿ ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ. ಆದುದರಿಂದ 1ನೇ ಆರೋಪಿಯಾದ ಶ್ರೀ ಇಕ್ಬಾಲ್ ಮಿಯಾನ್‌ರವರ ವಿರುದ್ಧ ಇದ್ದ ಲಂಚದ ಬೇಡಿಕೆ ಇಟ್ಟ ಆರೋಪವು ಭಾಗಶ: ಸಾಬೀತಾಗಿರುತ್ತದೆ ಮತ್ತು 2ನೇ ಆರೋಪಿಯ ವಿರುದ್ಧ ಇದ್ದ ಲಂಚದ ಬೇಡಿಕೆ ಮತ್ತು ಲಂಚ ಸ್ವೀಕರಿಸಿದ ಆರೋಪವು ಸಾಬೀತಾಗಿರುತ್ತದೆ.

ಕ್ರಮ ಸಂಖ್ಯೆ: (4)ರಲ್ಲಿ ಈ ವಿಚಾರಣಾ ವರದಿಯನ್ನು ಪರಿಶೀಲಿಸಿದ ಮಾನ್ಯ ಉಪ ಲೋಕಾಯುಕ್ತ–1 ರವರು ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಇವರು ಈಗಾಗಲೇ ದಿ:30.04.2013ರಂದು ವಯೋನಿವೃತ್ತಿ ಹೊಂದಿರುವ ಹಿನ್ನೆಲೆಯಲ್ಲಿ ಕೆ.ಸಿ.ಎಸ್.ಆರ್. ನಿಯಮ 214(1) (ಎ) ರಡಿ ಮಾಸಿಕ ಪಿಂಚಣಿಯ ಶೇ.50ರಷ್ಟು ಮೊತ್ತವನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ಶಿಫಾರಸ್ಸು ಮಾಡಿರುತ್ತಾರೆ. ಕ್ರಮ ಸಂಖ್ಯೆ(6)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ನೋಟೀಸನ್ನು ಆಪಾದಿತ ನೌಕರ ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿರವರಿಗೆ ನೀಡಲಾಗಿತ್ತು. ಇದಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ(7)ರಲ್ಲಿ ಆರೋಪಿತ ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿರವರು ನೀಡಿರುವ ಉತ್ತರವನ್ನು ಪರಿಗಣಿಸಬೇಕೆಂದು ಮತ್ತು ಆಪಾದಿಸಲಾದ ಆರೋಪಗಳಿಂದ ಅವರನ್ನು ದೋಷಾಮುಕ್ತನಾಗಿ ಮಾಡಿ ನ್ಯಾಯ ದೊರಕಿಸಿಕೊಡಬೇಕೆಂದು ಸವಿನಯದಿಂದ ಪ್ರಾರ್ಥಿಸಿರುತ್ತಾರೆ. ಅವರು ಸಲ್ಲಿಸಿರುವ ಉತ್ತರವನ್ನು ಪರಿಶೀಲಿಸಲಾಯಿತು:

a) ಪ್ರಾಸಿಕ್ಯೂಷನ್ ಪರವಾದ 1ನೇ ಸಾಕ್ಷಿ ತಾನು ದೂರು ನೀಡಿರುವ ದಾಖಲೆ ಪಿ–1ನ್ನು ಒಪ್ಪಿಕೊಂಡಿರುತ್ತಾರೆ. ದಾಖಲೆ ಪಿ–1ನ್ನು ಅವಗಾಹಿಸಿದಲ್ಲಿ ಅದು ಫಿರ್ಯಾದುದಾರರು 1ನೇ ಆರೋಪಿಯನ್ನು ಸಂಪರ್ಕಿಸಿ ರೂ. 350/–ನ್ನು ಶ್ರೀ ಪಾಟೀಲ್ ಎಂಬುವವರಿಗೆ ಕೊಟ್ಟಿದ್ದರೂ ಸಹ ತನ್ನ ಕೆಲಸವಾಗಿಲ್ಲವೆಂದು ತಿಳಿಸಿದ್ದು ಆ ವೇಳೆಯಲ್ಲಿ 1ನೇ ಆಪಾದಿತರು ಪಿ.ಡಬ್ಲ್ಯು–1 ಇವರಿಗೆ ಸದರಿ ಮೊತ್ತವನ್ನು ಪಾಟೀಲ್ ಅವರಿಂದ ವಾಪಸ್ಸು ಪಡೆಯಲು ಇಲ್ಲವೇ ಹೆಚ್ಚುವರಿ ಮೊತ್ತವನ್ನು ತನಗೂ ಹಾಗೂ 2ನೇ ಆರೋಪಿ ಶ್ರೀ ರಾಥೋಡ್‌ರವರಿಗೆ ₹. 500/–ಗಳನ್ನು ನೀಡಿದಲ್ಲಿ ಫಿರ್ಯಾದುದಾರರ ಕೆಲಸವನ್ನು ಮಾಡುವುದಾಗಿ ತಿಳಿಸಿರುತ್ತಾರೆ. ಫಿರ್ಯಾದನ್ನು ಲೋಕಾಯುಕ್ತ ಪೊಲೀಸರಿಗೆ ನೀಡುವಾಗ 2ನೇ ಮತ್ತು 3ನೇ ಪ್ರಾಸಿಕ್ಯೂಷನ್ ಸಾಕ್ಷಿಗಳು ಉಪಸ್ಥಿತರಿದ್ದು ಅವರುಗಳ ಹೇಳಿಕೆಯೂ Ex. ಪಿ–1 ನಲ್ಲಿ ತಿಳಿಸಿರುವಂತೆ 1ನೇ ಮತ್ತು 2ನೇ ಆರೋಪಿತರು ಲಂಚದ ಹಣಕ್ಕಾಗಿ ಬೇಡಿಕೆ ಇಟ್ಟಿರುತ್ತಾರೆಂದು ವಿಚಾರಣಾ ಅಧಿಕಾರಿಗಳ ವರದಿಯಲ್ಲಿ ಮೂಡಿಬಂದಿದೆ. ಆದ್ದುದರಿಂದ ಈ ವಾದವನ್ನು ಒಪ್ಪತಕ್ಕದ್ದಲ್ಲ.

b) ಈಗಾಗಲೇ ತಿಳಿಸಿರುವಂತೆ Ex.ಪಿ–1 ದಾಖಲಾತಿ ಪ್ರಕಾರ ಫಿರ್ಯಾದನ್ನು ಲೋಕಾಯುಕ್ತ ಪೊಲೀಸರಿಗೆ ನೀಡುವಾಗ 2ನೇ ಮತ್ತು 3ನೇ ಪ್ರಾಸಿಕ್ಯೂಷನ್ ಸಾಕ್ಷಿಗಳು ಉಪಸ್ಥಿತರಿದ್ದು ಅವರುಗಳ ಹೇಳಿಕೆಯೂ Ex. ಪಿ–1 ನಲ್ಲಿ ತಿಳಿಸಿರುವಂತೆ 1ನೇ ಮತ್ತು 2ನೇ ಆರೋಪಿತರು ಲಂಚದ ಹಣಕ್ಕಾಗಿ ಬೇಡಿಕೆ ಇಟ್ಟಿರುತ್ತಾರೆಂದು ವಿಚಾರಣಾ ಅಧಿಕಾರಿಗಳ ವರದಿಯಲ್ಲಿ ಮೂಡಿಬಂದಿದೆ. ಆದ್ದುದರಿಂದ ಈ ವಾದವನ್ನು ಒಪ್ಪತಕ್ಕದಲ್ಲ.

c) ಈ ಬಗ್ಗೆ ವಿಚಾರಣಾಧಿಕಾರಿಗಳು ಪರಿಶೀಲಿಸಿ ಫಿರ್ಯಾದುದಾರರಾದ ಪಿ.ಡಬ್ಲ್ಯು.–1 ಲೋಕಾಯುಕ್ತ ಪೊಲೀಸರಿಗೆ ದೂರು ನೀಡಿ ಅದರ ಅನುಸಾರ ದಾಖಲೆ ಪಿ–1ರಲ್ಲಿ, 1ನೇ ಮತ್ತು 2ನೇ ಆರೋಪಿತರು ಲಂಚದ ಹಣಕ್ಕಾಗಿ ಬೇಡಿಕೆ ಇಟ್ಟಿದ್ದು ಬಹಿರಂಗವಾಗಿರುತ್ತದೆ ಹಾಗೂ ಫಿರ್ಯಾದುದಾರರಿಗೆ ಆರೋಪಿತರೊಂದಿಗೆ ಮಾತನಾಡುವ ಮುನ್ನ ಟೇಪ್‌ರೆಕಾರ್ಡ್‌ನ್ನು ನೀಡಲಾಗಿದ್ದು ಅದರಲ್ಲಿ ರೆಕಾರ್ಡ್ ಆದ ನಂತರ ಪಿ.ಡಬ್ಲ್ಯು–1 ರವರು ಮರುದಿನ ದಿನಾಂಕ 03.08.2010ರಂದು ಫಿರ್ಯಾದು ನೀಡಿರುತ್ತಾರೆ. ಈ ರೀತಿಯಾಗಿ ಫಿರ್ಯಾದುದಾರರ ಕೆಲಸವನ್ನು ಮಾಡಲು 1ನೇ ಮತ್ತು 2ನೇ ಆರೋಪಿ ಲಂಚಕ್ಕಾಗಿ ಬೇಡಿಕೆ ಇಟ್ಟಿರುವುದು 5ನೇ ಸಾಕ್ಷಿಯೂ ದೃಢಪಡಿಸಿರುತ್ತಾರೆಂದು ವಿಚಾರಣೆಯಿಂದ ಮೂಡಿಬಂದಿದೆ. ಈ ಹಿನ್ನಲೆಯಲ್ಲಿ ವಿಚಾರಣಾಧಿಕಾರಿಗಳು 1ನೇ ಆರೋಪಿಯೂ ಲಂಚದ ಹಣಕ್ಕಾಗಿ ಬೇಡಿಕೆ ಇಟ್ಟಿರುವುದು ದೃಢಪಟ್ಟಿರುತ್ತದೆ ಎಂದು ನಿರ್ಣಯಿಸಿರುತ್ತಾರೆ.

d) ಫಿರ್ಯಾದುದಾರರ ಹೇಳಿಕೆ ಹಾಗೂ 2ನೇ ಮತ್ತು 3ನೇ ಸಾಕ್ಷಿದಾರರು ಫಿರ್ಯಾದುದಾರರು ದೂರು ನೀಡುವಾಗ ಉಪಸ್ಥಿತರಿದ್ದ ಕಾರಣ 1ನೇ ಆರೋಪಿಯು ಲಂಚದ ಹಣಕ್ಕಾಗಿ ಬೇಡಿಕೆ ಇಟ್ಟಿಲ್ಲ ಎಂಬುದನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

e) ಈಗಾಗಲೇ ಮೇಲೆ ವಿವರಿಸಿರುವಂತೆ ವಿಚಾರಣೆಯಲ್ಲಿ 1ನೇ ಆರೋಪಿಯೂ ಲಂಚದ ಹಣಕ್ಕೆ ಬೇಡಿಕೆ ಇಟ್ಟಿರುವುದು ಸ್ಪಷ್ಟವಾಗಿ ದಾಖಲೆಗಳ ಸಮೇತ ರುಜುವಾತಾಗಿರುತ್ತದೆ. ವಿಚಾರಣಾಧಿಕಾರಿ ಲಂಚದ ಹಣ ಬೇಡಿಕೆ ಇಟ್ಟಿರುವುದು ರುಜುವಾತಾಗಿದೆ ಎಂದು ನಿರ್ಣಾಯಿಸಿದರೂ ಸಹ ಎಲ್ಲಾ ಅಂಶಗಳನ್ನು ಪರಿಗಣಿಸಿದ ನಂತರವೇ ಮಾನ್ಯ ಉಪ ಲೋಕಾಯುಕ್ತರು ವಿಚಾರಣಾ ವರದಿಯೊಂದಿಗೆ ಅಧಿಕಾರಿಯನ್ನು ತಪಿತಸ್ಥರೆಂದು ಪರಿಗಣಿಸಿ ಇವರ ಮಾಸಿಕ ಪಿಂಚಣಿಯ ಶೇ.50 ರಷ್ಟು ಮೊತ್ತವನ್ನು ಕಡಿತಗೊಳಿಸುವ ದಂಡನೆಯನ್ನು ವಿಧಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಆದ್ದರಿಂದ, ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ನಿವೃತ್ತ ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರ ಅಹವಾಲನ್ನು ಒಪ್ಪಿಕೊಳ್ಳದೇ ಅವರ ವಿರುದ್ಧ ಅಕ್ರಮ ಸಂಭಾವನೆ ಪಡೆದ ಆರೋಪ ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯ ಹಾಗೂ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು, ಕರ್ನಾಟಕ ಲೋಕ ಸೇವಾ ಆಯೋಗವು ಸಹಮತಿಯಾದ ದಂಡನೆ ವಿಧಿಸಲು ನಿರ್ಣಯಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 41 ಕವಿಇ 2010, ಬೆಂಗಳೂರು, ದಿನಾಂಕ: 22.10.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214(1) (ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ನಿವೃತ್ತ ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೀದರ್, ಇವರ ಮಾಸಿಕ ಪಿಂಚಣಿಯ ಶೇ.50ರಷ್ಟು ಮೊತ್ತವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಶಶಿಧರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡಗಳು)

**P.R. 674**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.